# ಸ್ತ್ರೀಯರ ಸಮಸ್ಯೆಗಳು

## ಗಾಂಧೀಜಿ

ಕನ್ನಡಿಸಿದವರು :—

ಶ್ರೀ. ಪ್ರಲ್ಹಾದ ನರೇಗಲ್ಲು ಎಂ. ಎ. ಬಿ. ಟಿ.

ಶ್ರೀ. ವೆಂಕಟೇಶ ಮಳಿಯೆ

ಮಾರಾಟಗಾರರು—

ಸಾಹಿತ್ಯಭಾಂಡಾರ ಹುಬ್ಬಳ್ಳಿ

# ಪ್ರ ಕಾ ಶ ಕ ರಿ ೦ ದ

---

ಗಾಂಧೀ ಸಾಹಿತ್ಯ ಕನ್ನಡದಲ್ಲಿ ಈಗಾಗಲೇ ತಕ್ಕಷ್ಟು ಪ್ರಕಟವಾಗಿದೆ; ಆಗುತ್ತಲಿದೆ. ಈ ಮಾರ್ಗದಲ್ಲಿ ನಮ್ಮದೂ ಇದೊಂದು ಪ್ರಯತ್ನ. ಭಾರತದ ಸ್ತ್ರೀಯರ ಸಮಸ್ಯೆಗಳನ್ನು ಕುರಿತು ಗಾಂಧೀಜಿ ಅನೇಕ ಭಾಷಣಗಳನ್ನು ಮಾಡಿದ್ದಾರೆ. ತಮ್ಮ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದಿದ್ದಾರೆ. ಗಾಂಧೀಜಿಯ ಸ್ತ್ರೀಸಮಸ್ಯಾಪರಲೇಖನಗಳನ್ನೆಲ್ಲ ಸಂಗ್ರಹಿಸಿ ಸಿಂಧಿನ ಶ್ರೀ. ಆನಂದ ಟಿ. ಹಿಂಗೊರಾಣಿಯವರು ‘ To The Women ’ ಎಂಬ ಗ್ರಂಥವನ್ನು ೧೯೪೧ರಲ್ಲಿ ಪ್ರಕಟಿಸಿದ್ದು ಆ ಪ್ರಕಟನೆಯನ್ನು ಬಾಪೂಜಿ ಸ್ವಹಸ್ತದಿಂದ ಹರಸಿದ್ದಾರೆ. ಆ ಪ್ರಕಟನೆಯೊಳಗಿನ ೭೫ ಬರಹಗಳಲ್ಲಿ ೨೫ನ್ನು ಮಾತ್ರ ಇಲ್ಲಿ ಕನ್ನಡಿಸಲಾಗಿದೆ. ಇದನ್ನು ಕನ್ನಡಿಸಿದ ನಮ್ಮ ಇಬ್ಬರೂ ಲೇಖಕ ಮಿತ್ರರಿಗೆ ನಾವು ಋಣಿಗಳು. ನಮ್ಮ ಸಮಾಜದ ಮೂಲಭೂತ ಸಮಸ್ಯೆಗಳ ಮರ್ಮವನ್ನರಿತ ಗಾಂಧೀಜಿ, ಜೀವನದಲ್ಲಿ ದಿನದಿನವೂ ನಮ್ಮ ಭಗಿನಿಯರಿಗೆ ಒದಗುವ ಅಡ್ಡಿ ಆತಂಕ ಸಂಶಯಗಳ ಕೂಟಪ್ರಶ್ನೆಗಳಿಗೆ ತಮ್ಮದೇ ಆದ ಅಧಿಕಾರವಾಣಿಯಿಂದ ಉತ್ತರವಿತ್ತಿದ್ದಾರೆ. ಬಾಳುವೆಗೆ ಬೆಳಕನ್ನೀಯುವ ಈ ಪ್ರಕಟನೆಯ ಲಾಭವನ್ನು ಕನ್ನಡಿತಿಯರು ಕಾಲೋಚಿತವಾಗಿ ಮಾಡಿಕೊಳ್ಳುವರೆಂದು ಕೋರಿದ್ದೇವೆ.

---

# ಪರಿವಿಡಿ

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೩ | ೨ | ಪ್ರತಿವಾದಿಸುವುದಿಲ್ಲ. | ಪ್ರತಿಪಾದಿಸುವುದಿಲ್ಲ. |
| ೩ | ೧೦ | ಆಧೀನದಲ್ಲಿರಿಸಿ | ಅಧೀನದಲ್ಲಿರಿಸಿ |
| ೧೨ | ೧೬ | ಕರ್ತವ್ಯಲೋಲುವತೆಗೆ | ಕರ್ತವ್ಯಲೋಲುಪತೆಗೆ |
| ೧೩ | ೨೦ | ಆಧ್ಯತೆಯಿಂದ | ಆದ್ಯತೆಯಿಂದ |
| ೧೬ | ೧೦ | ಭಾರವೇನೂ | ಭಾರವೇನೋ |
| ೧೭ (ಕೆಳಗಿನಿಂದ) | ೧೨ | ಬುದ್ಧಿಮತ್ತಿ | ಬುದ್ಧಿಮತ್ತೆ |
| ೧೮ | ೧೯ | ಕುರಿತು | ಕುರಿತು. |
| ೨೦ | ೧೯ | ಬುದ್ಧಿ ಮತ್ತೆ | ಬುದ್ಧಿಮತ್ತೆ |
| ೨೦ | ೨೫ | ನ್ಯಾಯವಾದ ಯಾವ | ನ್ಯಾಯವಾದ |
| ೨೩ | ೧೨ | ತಾಯಂದಿರಲ್ಲಂತೂ | ತಾಯಂದಿರಂತೂ |
| ೨೩ | ೧೪ | ಉಪಕಾರಕ್ಕಾಗಿ | ಉಪಕಾರಕ್ಕಾಗಿಯೂ |
| ೨೪ | ೫ | ಕಾರ್ಯ ಕ್ಷೇತ್ರ | ಕಾರ್ಯಕ್ಷೇತ್ರ |
| ೨೪ | ೧೭ | ಗಾಳಿದುಂಬ | ಗಾಳಿ ತುಂಬ |
| ೨೮ | ೧೭ | ಬೀರುತ್ತಲಿವೆ. | ಬೀರುತ್ತಲಿದೆ. |
| ೩೧ | ೨೨ | ರೋಗರುಜನ | ರೋಗರುಜಿನ |
| ೩೧ | ೨೪ | ದೋರುವುದು. | ತೋರುವುದು. |
| ೩೪ (ಕೆಳಗಿನಿಂದ) | ೧೧ | ಪ್ರತಿವಾದಕಳಾದ | ಪ್ರತಿಪಾದಕಳಾದ |
| ೩೫ | ೧೫ | ವೈಜ್ಞಾವಿಕರೂ | ವೈಜ್ಞಾನಿಕರೂ |
| ೩೬ | ೧೨ | ನಿರಾಶೆರಾಗುವೆವು. | ನಿರಾಶರಾಗುವೆವು. |
| ೩೮ | ೩ | ಮಾಯಜಾಲಿ | ಮಾಯಾಜಾಲ |
| ೪೦ | ೧೦ | ಸವಾರಿಯಾದ | ಸವಾರನಾದ |
| ೪೦ | ೧೫ | ಸವಾರಿ | ಸವಾರ |
| ೪೦ | ೧೯ | ಸಿಗಿಬಿದ್ದೆವೆಂಬ | ಸಿಕ್ಕಿಬಿದ್ದೆವೆಂಬ |
| ೪೦ | ೨೦ | ಶಾರೀರಕ | ಶಾರೀರಿಕ |
| ೪೨ | ೧೪ | ಸವಾರಿಯ | ಸವಾರನ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೪೪ | ೧೮ | ಏಕೆ? | ಏಕೆ |
| ೪೪ | ೨೪ | ಮಾನರಕ್ಷೆಣೆ | ಮಾನರಕ್ಷಣೆ |
| ೪೮ | ೧೨ | ಕ್ಷಿಸಿಕೊಳ್ಳಲು | ರಕ್ಷಿಸಿಕೊಳ್ಳಲು |
| ೪೮ (ಕೆಳಗಿನಿಂದ) | ೯ | ನಡೆದಿದೆಯೆ | ನಡೆದಿದೆಯೊ |
| ೪೮ ( ,, ) | ೯ | ಆಬಲೆ | ಅಬಲೆ |
| ೫೩ | ೫ | ಶೈಕಣಿಕ | ಶೈಕ್ಷಣಿಕ |
| ೫೪ | ೨೨ | ಉದಾರಕೆ | ಉದಾರತೆ |
| ೫೯ | ೧೫ | ಸಮಾಜಿಕ | ಸಾಮಾಜಿಕ |
| ೬೯ | ೧೪ | ಪಶುಕೋಟಿ | ಪಶುಕೋಟಿಯು |
| ೬೯ | ೧೮ | ಪಾಶ್ಚಾತ್ಯರವೆಂದು | ಪಾಶ್ಚಾತ್ಯರದೆಂದು |
| ೭೦ | ೨ | ಸತ್ಯಾ ಸತ್ಯತೆಯು | ಸತ್ಯಾಸತ್ಯತೆಯು |
| ೭೦ | ೧೨ | ಯಿಟ್ಟುಕೊಂಡರೆ | ಇಟ್ಟುಕೊಂಡರೆ |
| ೭೦ | ೨೧ | ವ್ಯಕ್ತಿಯು | ವ್ಯಕ್ತಿಯು, ಮೇಲೆ |
| ೭೪ | ೧೦ | ಸಂಗಾಡಿಗನನ್ನು | ಸಂಗಡಿಗನನ್ನು |
| ೭೭ | ೬ | ಕವಿಪುಂಗರಾದ | ಕವಿಪುಂಗವರಾದ |
| ೮೦ | ೨೦ | ಪ್ರಮಾಣಿಕವಾಗಿದೆ. | ಪ್ರಮಾಣಿತವಾಗಿದೆ. |
| ೮೦ | ಕೊನೆಯುಸಾಲು | ಆಶ್ಲೀಲವನ್ನು | ಅಶ್ಲೀಲವನ್ನು |
| ೮೧ | ೬ | ಮಾನಿಶಾಲಿಯಾದ | ಮಾನಶಾಲಿಯಾದ |
| ೮೧ | ೨೧ | ಡೊಕ್ಕಾಗಿ | ಚೊಕ್ಕ |
| ೮೨ | ೧೬ | ಸಚ್ಚರಿತ್ರರಾಗಿದ್ದರೆ | ಸಚ್ಚರಿತ್ರರಾಗದಿದ್ದರೆ |
| ೮೪ | ೪ | ಶೋಖುದ್ರವ್ಯ | ರೋಖುದ್ರವ್ಯ |
| ೮೫(ಕೆಳಗಿನಿಂದ) | ೧೩ | ಇಂಗ್ಲಂಡದಿಂದ | ಇಂಗ್ಲಂಡಿನಿಂದ |
| ೮೬ | ೧ | ರೂಢಿ | ರೂಢಿ, |
| ೮೬ | ೧೪ | ಕಾಲೇಜದ | ಕಾಲೇಜಿನ |
| ೮೮ | ೬ | ತರ್ಕರ ರಕ್ಷಣೆ | ತರ್ಕರಕ್ಷಣೆ |
| ೧೦೦ | ೬ | ಅರ್ಥ ಪಶುಶಕ್ತಿ ಎಂದೇ | ಪಶುಶಕ್ತಿ ಎಂದೇ ಅರ್ಥ |

# ಸ್ತ್ರೀಯರ ಸಮಸ್ಯೆಗಳು

## ಹಿಂದೂ ಸ್ತ್ರೀ

[" ಹೆಂಣನ್ನು ಗಂಡನ ಅತಿಶಯ ಅಧೀನದಲ್ಲಿರಿಸಿ, ವ್ಯಕ್ತಿತ್ವವನ್ನು ಕಳೆದು ಕೊಂಡು ಗಂಡನಲ್ಲಿ ತಾದಾತ್ಮ್ಯ ಹೊಂದುವಂತೆ ಅವಳಿಗೆ ಒತ್ತಾಯಪಡಿಸಿ ಹಿಂದೂ ಸಂಸ್ಕೃತಿಯು ಸ್ತ್ರೀಯರ ಮೇಲೆ ಮಹಾ ಅನ್ಯಾಯಮಾಡಿದೆ. ಇದರಿಂದ ಕೆಲ ಸಲ ಗಂಡನಾದವನು ಹೆಂಡತಿಯ ಹಕ್ಕುಗಳನ್ನೆಲ್ಲ ದರ್ಪದಿಂದ ಕಸಿದು ತನ್ನ ಅಧಿಕಾರ ಹೇರಿ ಪಶುವಿನ ಮಟ್ಟಕ್ಕೆ ಇಳಿದಿದ್ದಾನೆ. ".]

ಸಹೋದರನೊಬ್ಬನು ತನ್ನ ವಿವಾಹಿತ ಸಹೋದರಿಯ ಸಂಕಟಗಳನ್ನು ವಿವರಿಸಿ ಉದ್ದವಾದ ಓಲೆಯೊಂದನ್ನು ಬರೆದಿದ್ದಾನೆ. ಅದರ ಸಾರಾಂಶವಿಂತಿದೆ :—

"ಕೆಲ ವರ್ಷಗಳ ಹಿಂದೆ ನನ್ನ ಸೋದರಿಯ ಮದುವೆಯಾಯಿತು. ಅವಳ ಗಂಡನ ಶೀಲದ ವಿಷಯವಾಗಿ ನಮಗೆ ಆವೊದಲು ಏನೂ ಗೊತ್ತಿರಲಿಲ್ಲ. ಆದರೆ ಮುಂದೆ ಕೆಲದಿನಗಳಲ್ಲಿಯೆ ಅವನು ಮಹಾ ಕಾಮುಕನೆಂದೂ, ಅವನ ದುಂಡುತನಕ್ಕಾಗಲಿ ಘಟಿಂಗತನಕ್ಕಾಗಲಿ ಮಿತಿಯೆ ಇಲ್ಲವೆಂದೂ ತಿಳಿದುಬಂದಿತು. ಅವನಿಗೆ ಮಾನಮರ್ಯಾದೆಗಳೊಂದೂ ತಿಳಿಯದು. ತನ್ನ ಗಂಡ ದಿನದಿನಕ್ಕೆ ಈ ದುಷ್ಚಟದಲ್ಲಿ ಮುಳುಮುಳುಗುತ್ತಿದ್ದುದನ್ನು ನನ್ನ ಸೋದರಿ ಮದುವೆಯ ಬಳಿಕ ಕೆಲದಿನಗಳಲ್ಲಿಯೆ ಕಂಡುಕೊಂಡಳು ಆ ಬಗ್ಗೆ ಅವಳು ಪ್ರತಿಭಟಿಸಿದಳು. ಅವಳ ಈ ಆಚರಣೆ ಅವನಿಗೆ ಸಹನವಾಗಲಿಲ್ಲ. ಆದುದರಿಂದ ಅವಳಿಗೆ ಬುದ್ಧಿಕಲಿಸುವುದಕ್ಕಾಗಿ ಅವಳೆದುರಿನಲ್ಲಿಯೆ ತನ್ನ ಘಟಿಂಗತನ ಪ್ರಾರಂಭಿಸಿದ. ಸಾಲದ್ದಕ್ಕೆ ಅವಳನ್ನು ಹೊಡೆ-ಬಡೆವ, ಒಂಟಿಗಾಲಾಗಿ ನಿಲ್ಲಿಸುವ, ಉಪವಾಸ ಕೆಡಹುವ ಶಿಕ್ಷೆ ವಿಧಿಸತೊಡಗಿದ ತನ್ನ ಅತಿಕಾಮವನ್ನು ಕಣ್ಣಾರೆ ನೋಡಲೆಂಬ ದುರುದ್ದೇಶದಿಂದ ಅವಳನ್ನು ಕಂಬಕ್ಕೆ ಕಟ್ಟಿಹಾಕಲೂ ಹೇಸಲಿಲ್ಲ ಈಗ ನನ್ನ ತಂಗಿ ಎದೆಯೊಡೆದಿದ್ದಾಳೆ. ಅವಳ ಮನೋವೇದನೆ ನೋಡಿ ನಮ್ಮ

ಹೃದಯ ತಳಮಳಿಸುವುದು. ಆದರೆ ನಾವು ನಿಸ್ಸಹಾಯರು. ಈಗ ನೀವು ನಮಗಾಗಲಿ ಅವಳಿಗಾಗಲಿ ಯಾವ ದಾರಿ ತೋರುವಿರಿ? ಹಿಂದೂ ಸ್ತ್ರೀಗೆ ಸಮಾನತೆ, ಹಕ್ಕು ಯಾವುದೂ ಇಲ್ಲ. ಅವಳು ಕೇವಲ ಪುರುಷನ ದಯಾಧೀನಳು. ಇದು ಹಿಂದೂಧರ್ಮದ ಅತ್ಯಂತ ಲಜ್ಜಾಸ್ಪದ ಅವಸ್ಥೆಯ ಒಂದು ಚಿತ್ರ. ಗಂಡ ಕ್ರೂರ, ಹೃದಯಹೀನನಾಗಬಯಸಿದರೆ ಆ ದುರ್ದೈವಿ ಹೆಂಡತಿಗೆ ಅವನಿಂದ ಬಿಡುಗಡೆಹೊಂದುವ ಯಾವ ಸೌಲಭ್ಯವೂ ಇಲ್ಲ. ಗಂಡಸು ಮನಹೊರಳಿದತ್ತ ಹೊಲ್ಲದ ಹೊಲೆಗೆಲಸ ಮಾಡಲೊಲ್ಲನೇಕೆ, ಅವನ ಸ್ವೈರಾಚಾರದ ವಿರುದ್ಧ ಕಿರಿಬೆರಳೆತ್ತಿ ತೋರುವವರಾರೂ ಇಲ್ಲ. ಆದರೆ ಅದೇ ಹೆಂಗುಸು ಒಮ್ಮೆ ಮದುವೆಯಾದಳೆಂದರೆ ಸರಿ, ಗಂಡನ ಕೃಪಾಕಟಾಕ್ಷವೆ ಅವಳಿಗೆ ಇಹ–ಪರ. ಇಂಥ ಸಾವಿರಾರು ಸ್ತ್ರೀಯರು ಯಮಯಾತನೆಗಳಿಂದ ನರಳುತ್ತಿದ್ದಾರೆ, ಕಂಬನಿ ಮಿಡಿಯುತ್ತಿದ್ದಾರೆ. ಹಿಂದೂಧರ್ಮವು ಇಂಥ ಅನಿಷ್ಟಗಳಿಂದ ದೂರವಾಗದೆಹೋದರೆ ನಮ್ಮ ಏಳ್ಗೆಯ ಕನಸು ನನಸಾಗಬಲ್ಲುದೆ?"

ಈ ಪತ್ರಲೇಖಕರು ಸುಶಿಕ್ಷಿತರು. ತಮ್ಮ ತಂಗಿಯ ಗೋಳನ್ನು ಈ ಸಾರಾಂಶದಲ್ಲಿರುವುದಕ್ಕಿಂತ ಹೆಚ್ಚು ರೋಮಾಂಚನಕಾರಕವಾಗಿ ತಮ್ಮ ಪತ್ರದಲ್ಲಿ ಚಿತ್ರಿಸಿದ್ದಾರೆ. ಅವರು ನನಗೆ ತಮ್ಮ ಹೆಸರು-ವಿಳಾಸ ಬರೆದು ತಿಳಿಸಿದ್ದಾರೆ. ಅವರು ಆಕ್ರೋಶಗೊಂಡು ಹಿಂದೂಧರ್ಮದ ಮೇಲೆ ಹರಿಹಾಯ್ದಿದ್ದಾರೆ. ಅವರ ಈ ಆಕ್ರೋಶ ಕ್ಷಮಾರ್ಹವಾದುದಾದರೂ, ಪ್ರತ್ಯೇಕವಾದ ಒಂದು ಉದಾಹರಣೆಯ ಆಧಾರದಿಂದ ಹಿಂದೂಧರ್ಮಕ್ಕೆಲ್ಲ ಸಾಮಾನ್ಯ ದೋಷಾರೋಪಣೆ ಮಾಡಿದುದು ಭ್ರಾಂತವಾದ ಉತ್ಪ್ರೇಕ್ಷೆಯೆ ಸರಿ. ಏಕೆಂದರೆ ಇಂದಿಗೂ ಲಕ್ಷೋಪಲಕ್ಷ ಹಿಂದೂಹೆಂಗಳೆಯರು ತಮ್ಮ ಮನೆಯ ರಾಣಿಯರಾಗಿ ನೆಮ್ಮದಿಯಿಂದ ಬಾಳುತಿದ್ದಾರೆ. ತಮ್ಮ ಗಂಡಂದಿರ ಮೇಲೆ ಅವರಿಗಿರುವ ವರ್ಚಸ್ಸು, ಅಧಿಕಾರ ಎಂಥ ಹೆಂಗುಸಿಗೂ ಮತ್ಸರವನ್ನುಂಟುಮಾಡದಿರಲಾರದು. ಅವರ ಈ ಅಧಿಕಾರ ಪ್ರೇಮಬಲದಿಂದುಂಟಾದುದು. ಲೇಖಕರು ತಮ್ಮ ಓಲೆಯಲ್ಲಿ ಚಿತ್ರಿಸಿದ ನಿರ್ದಯತನದ ಚಿತ್ರ ಹಿಂದೂಧರ್ಮದ ಅನ್ಯಾಯದ ಚಿತ್ರವಲ್ಲ. ಅದು ಮಾನವಸ್ವಭಾವದಲ್ಲಿಯ ಪಶುವೃತ್ತಿಯ ಚಿತ್ರ. ಅದನ್ನು ಎಲ್ಲ ಕಾಲದ, ಎಲ್ಲ ಧರ್ಮಗಳ

ಜನಗಳಲ್ಲಿ ಕಾಣಬಹುದು. ಎಷ್ಟೋ ಸ್ತ್ರೀಯರು ತಮ್ಮ ಹಕ್ಕುಗಳನ್ನು ಪ್ರತಿಪಾದಿಸಲೂ ಅರಿತಿಲ್ಲ; ಅರಿತೂ ಪ್ರತಿಪಾದಿಸುವುದಿಲ್ಲ. ಇಂತಹ ಸಭ್ಯ ಸ್ತ್ರೀಯರಿಗೆ ಹೃದಯಹೀನ ಗಂಡಂದಿರಿಂದ ರಕ್ಷಣೆಪಡೆಯಲು "ವಿವಾಹ ವಿಚ್ಛೇದನ" ಸೌಲಭ್ಯ ಯಾವ ಸಹಾಯವನ್ನೂ ನೀಡಿಲ್ಲವೆಂಬುದು ಸರ್ವ ಶ್ರುತ. ಆದುದರಿಂದ ಬೇರಾವ ಕಾರಣಗಳಿಂದಲ್ಲವಾದರೂ, ಸುಧಾರಣೆಯ ಹಿತದೃಷ್ಟಿಯಿಂದಲಾದರೂ ಅತಿಶಯೋಕ್ತಿ ಮತ್ತು ದುಡುಕುತನವನ್ನು ದೂರೀಕರಿಸುವುದು ಸುಧಾರಕರ ಮೊದಲನೆಯ ಕೆಲಸ.

ಆದರೂ ಈ ಲೇಖಕರು ಉಲ್ಲೇಖಿಸಿದಂತಹ ಘಟನೆಗಳು ಹಿಂದೂ ಸಮಾಜದಲ್ಲಿ ಸರ್ವಸಾಮಾನ್ಯವಾಗಿ ಇದ್ದೇ ಇವೆಯೆಂಬುದು ನಿಜ. ಹೆಣ್ಣನ್ನು ಗಂಡನ ಅತಿಶಯ ಅಧೀನದಲ್ಲಿರಿಸಿ, ವ್ಯಕ್ತಿತ್ವವನ್ನು ಕಳೆದು ಕೊಂಡು ಗಂಡನಲ್ಲಿ ತಾದಾತ್ಮ್ಯ ಹೊಂದುವಂತೆ ಆಕೆಗೆ ಒತ್ತಾಯಪಡಿಸಿ ಹಿಂದೂ ಸಂಸ್ಕೃತಿಯು ಸ್ತ್ರೀಯರ ಮೇಲೆ ಮಹಾ ಅನ್ಯಾಯಮಾಡಿದೆ. ಇದರಿಂದ ಕೆಲ ಸಲ ಗಂಡನಾದವನು ಹೆಂಡತಿಯ ಹಕ್ಕುಗಳನ್ನೆಲ್ಲ ದರ್ಪದಿಂದ ಕಸಿದು ತನ್ನ ಅಧಿಕಾರ ಹೇರಿ ಪಶುವಿನ ಮಟ್ಟಕ್ಕೆ ಇಳಿದಿದ್ದಾನೆ. ಆದರೆ ಈ ಅನ್ಯಾಯದ ನಿವಾರಣೆ ಕಾಯದೆಕಟ್ಟಳೆಯ ಮುಖಾಂತರದಿಂದಲ್ಲ; ಸ್ತ್ರೀಯರಿಗೆ—ಕೇವಲ ಕುಮಾರಿಯರೆಂದಲ್ಲ, ಸ್ತ್ರೀಯರೆಂದೇ—ಸ್ತ್ರೀತ್ವದ ನಿಜವಾದ ಶಿಕ್ಷಣವೀಯುವುದರಲ್ಲಿ, ಮತ್ತು ಗಂಡನ ಅಮಾನುಷ ಅತ್ಯಾಚಾರಗಳ ಬಗ್ಗೆ ಪ್ರಚಾರಮಾಡಿ ಜನತೆಯಲ್ಲಿ ಜಾಗೃತಿ ಹುಟ್ಟಿಸುವುದರಲ್ಲಿದೆ. ಇಲ್ಲಿ ನಮ್ಮೆದುರಿಗಿರುವ ಹುಡುಗೆಯ ಸಂಕಷ್ಟಗಳ ನಿವಾರಣೋಪಾಯ ಬಲು ಸುಲಭಸಾಧ್ಯ. ಸಂತ್ರಸ್ತ ನೋದರಿಯೊಡನೆ ಅವಳ ಆಪ್ತೇಷ್ಟರು ಅಳುತ್ತ ಕುಳಿತುಕೊಳ್ಳುವುದರಲ್ಲಿ ಪುರುಷಾರ್ಥವಿಲ್ಲ ಅವರು ಅವಳ ರಕ್ಷಣೆಯ ಭಾರ ಹೊರಲಿ; ದುಶ್ಶೀಲ ಗಂಡನನ್ನು ಸಂತೈಸುವುದು ಇಲ್ಲವೆ ಅವನ ಜೊತೆಯಲ್ಲಿ ಬಾಳುವುದು ತನ್ನ ಧರ್ಮವಲ್ಲವೆಂದು ಅವಳಿಗೆ ತಿಳಿಸಿಕೊಡಲಿ. ಗಂಡ ತನ್ನ ಹೆಂಡತಿಯನ್ನು ಪೂರ್ಣ ದುರ್ಲಕ್ಷಿಸಿದಾನೆಂದು ಈ ಓಲೆಯಿಂದ ಸ್ಪಷ್ಟವಾಗಿ ಕಾಣಬರುವುದು. ಆದುದರಿಂದ ಅವಳೂ ಸಹ ವಿವಾಹಧರ್ಮಬಂಧನ ತೊಡೆಯದೆ ಗಂಡನಿಂದ ದೂರವಿದ್ದು ತಾನು ಅವಿವಾಹಿತಳೆಂಬಂತೆ ಇರಲು ಕಲಿಯಬೇಕು.

ವಿವಾಹವಿಚ್ಛೇದನದ ಹಕ್ಕಿಲ್ಲದ ಹಿಂದೂ ಸ್ತ್ರೀಯರಿಗೂ ನ್ಯಾಯ ಪಡೆಯಲು ಎರಡು ಉಪಾಯಗಳಿವೆ: ಗಂಡನ ಪೀಡನೆಯ ಬಗೆಗೆ ಕಾಯದೆ ಮುಖಾಂತರ ಅವನನ್ನು ದಂಡಿಸುವುದು ಒಂದು; ತನ್ನ ಜೀವನೋಪಾಯಕ್ಕೆ ಸಾಕಷ್ಟು ಹಣ ತೆರುವಂತೆ ಮಾಡಿಸುವುದು ಮತ್ತೊಂದು. ಆದರೆ ನಾನು ಅನೇಕ ಘಟನೆ ನೋಡಿದೇನೆ. ಅವುಗಳಲ್ಲಿ ಸಂಪೂರ್ಣವಲ್ಲದಿದ್ದರೂ ಬಹ್ವಂಶಗಳಲ್ಲಿ ಈ ತೆರನ ಉಪಾಯಗಳು ನಿರುಪಯೋಗವಾಗಿವೆಯೆಂದು ನನ್ನ ಅನುಭವ. ನಿಜವಾದ ಸತಿಗೆ ಈ ಕಾಯದೆಗಳಿಂದ ಯಾವ ನೆಮ್ಮದಿಯೂ ಉಂಟಾಗಿಲ್ಲ; ಅಲ್ಲದೆ ಇದರಿಂದ ಅಸಭ್ಯಾಚರಣೆಯುಳ್ಳ ಪುರುಷನ ಸುಧಾರಣೆ ಅಸಂಭವವಲ್ಲದಿದ್ದರೂ ಹೆಚ್ಚು ಗಡಚಾಗಿದೆ. ಸಮಾಜದ, ಹೆಚ್ಚಾಗಿ ಹೆಂಡತಿಯ ನಿಜವಾದ ಉದ್ದೇಶ ಇಂಥ ಗಂಡನನ್ನು ಸುಧಾರಿಸುವುದೇ ಅಲ್ಲವೆ? ನಮ್ಮ ಈ ಹುಡುಗೆಯ ತವರಿನವರು ಅವಳ ಹೊಟ್ಟೆಗೆ ಹಾಕುವಷ್ಟು ಶಕ್ತಿಯುಳ್ಳವರಿದಾರೆ. ಹೀಗೆ ಹೊಟ್ಟೆ-ಬಟ್ಟೆಗೆ ಕೊಡಲು ಅಸಮರ್ಥರಾದ ಎಷ್ಟೋ ತವರಿನ ಉದಾಹರಣೆಗಳಿವೆ. ಆದರೆ ಅಂಥ ಸ್ತ್ರೀಯರಿಗೆ ಆಶ್ರಯವೀಯುವ ಎಷ್ಟೋ ಸಂಘಸಂಸ್ಥೆಗಳು ದೇಶದಲ್ಲೆಲ್ಲ ಹುಟ್ಟಿಕೊಳ್ಳುತ್ತಲಿವೆ.

ಇನ್ನೊಂದು ಪ್ರಶ್ನೆ :—ವಿವಾಹವಿಚ್ಛೇದದ ಸೌಲಭ್ಯವಿಲ್ಲದ ಸ್ತ್ರೀಯು ಗಂಡನಿಂದ ಹೊರದೂಡಲ್ಪಟ್ಟನಂತರ ಅಥವಾ ತಾನೆ ಅವನನ್ನು ತೊರೆದ ನಂತರ ಅವಳು ತನ್ನ ಕಾಮತೃಷ್ಣೆ ಹೇಗೆ ನೀಗಿಸಿಕೊಳ್ಳಬೇಕು? ಆದರೆ ಅಂತಹರ ಅಂಕೆ-ಸಂಖ್ಯೆ ಪರಿಶೀಲಿಸಿದಲ್ಲಿ ಇದು ಮಹತ್ವದ ಪ್ರಶ್ನೆಯೆಂದು ನನಗೆ ತೋಚುವುದಿಲ್ಲ. ಏಕೆಂದರೆ ಯಾವ ಸಮಾಜದ ಸಂಪ್ರದಾಯಗಳು ನೂರಾರು ಶತಮಾನಗಳಿಂದ ವಿವಾಹವಿಚ್ಛೇದನವನ್ನೇ ಖಂಡಿಸುತ್ತ ಬಂದಿವೆಯೊ ಆ ಸಮಾಜದ ಸ್ತ್ರೀಯು ತನ್ನ ಮೊದಲ ದಾಂಪತ್ಯಜೀವನದ ಕಟು ಅನುಭವದ ಫಲವಾಗಿ ಪುನರ್ವಿವಾಹಕ್ಕೆ ಒಪ್ಪುವುದಿಲ್ಲ. ಯಾವ ಸಮಾಜದಲ್ಲಿಯೆ ಆಗಲಿ ಇಂತಹದೊಂದು ಸೌಲಭ್ಯ ಅಗತ್ಯವೆಂಬ ವಿಚಾರ ಜನಸಾಮಾನ್ಯರಲ್ಲಿ ಸುಳಿವುದೊಂದೆ ತಡ, ಅದು ಖಂಡಿತವಾಗಿ ಆಚರಣೆಯಲ್ಲಿ ಬಂದೇ ಬರುವುದೆಂದು ನನ್ನ ಭಾವನೆ. ಈ ಹುಡುಗೆ ದೂರಿಕೊಳ್ಳುವುದು ಗಂಡನ ದುರಾಚರಣೆಗಾಗಿಯಲ್ಲದೆ ಅವನಿಂದ ತನ್ನ ಕಾಮತೃಷ್ಣೆ

ನೀಗಲಾರದೆಂದಲ್ಲ. ಈ ಸಂದರ್ಭದಲ್ಲಿ, ಈ ಮೊದಲೆ ನಾನು ಹೇಳಿದಂತೆ, ಮನೋವೃತ್ತಿಯ ಮಾರ್ಪಾಟೇ ಅದಕ್ಕೆ ತಕ್ಕ ಉಪಾಯವು. ನಮ್ಮ ಅನೇಕ ದೋಷಗಳಂತೆ ನಮ್ಮ ಅಸಹಾಯತೆಯೂ ಒಂದು ಕಾಲ್ಪನಿಕ ಜಾಡ್ಯ. ದೃಷ್ಟಿದೋಷವೆ ಸಂಕಟಗಳ ಮೂಲಕಾರಣ. ಆದುದರಿಂದ ನಾವು ಸ್ವಲ್ಪ ಹೊಸದೃಷ್ಟಿ, ವಿವೇಕ ಉಪಯೋಗಿಸಿದಲ್ಲಿ ಈ ಕಾಲ್ಪನಿಕ ಸಂಕಟಗಳ ನಿವಾರಣೆಯಾಗುವುದು. ಆದುದರಿಂದ ಇಂಥ ಸಂದರ್ಭಗಳಲ್ಲಿ ಮಿತ್ರರಾಗಲಿ, ಬಂಧುಗಳಾಗಲಿ ಹುಡುಗೆಯನ್ನು ಕೇವಲ ಗಂಡನ ದಬ್ಬಾಳಿಕೆಯಿಂದ ಬಿಡಿಸಿ ತಂದು ತೃಪ್ತಿಗೊಳ್ಳುವುದು ಉಚಿತವಲ್ಲ. ಅವಳು ಸಾರ್ವಜನಿಕ ಸೇವಾ ಕಾರ್ಯಗಳಿಗೆ ಯೋಗ್ಯತೆ ಪಡೆವಂತೆ ಅವಳ ಮನವೊಲಿಸಬೇಕು. ಇಂಥ ಶಿಕ್ಷಣವಿತ್ತಲ್ಲಿ ಗಂಡನ ಹಾಸಿಗೆಯ ಅನಿಶ್ಚಿತ ಅಧಿಕಾರಕ್ಕಿಂತ ಹೆಚ್ಚಿನ ಅಧಿಕಾರವನ್ನು ಹುಡುಗೆಗೆ ಒದಗಿಸಿದಂತೆಯೆ ಸರಿ. ಈ ಬಗೆಯ ನಷ್ಟಭರತಿ ಶ್ರೇಷ್ಠವಲ್ಲವೆ?

**ಯಂಗ್ ಇಂಡಿಯಾ, ೩–೧೦–೧೯೨೯**

# ಗೆಳತಿಯೊಬ್ಬಳ ಪ್ರಶ್ನೆಗಳು

[" ನನ್ನ ದೃಷ್ಟಿಯಲ್ಲಿ ಸೀತಾದೇವಿಯೆ ಆದರ್ಶಪತ್ನಿ, ಶ್ರೀರಾಮನೆ ಆದರ್ಶ ಪತಿ. ಆದರೆ ಸೀತಾದೇವಿ ರಾಮನ ದಾಸಿಯಾಗಿರಲಿಲ್ಲ. ಅಥವಾ ಅವರು ಪರಸ್ಪರರ ದಾಸರಾಗಿದ್ದರು ... ......... ತಾನು ಅನುಸರಿಸುವ ಮಾರ್ಗ ಸರಿಯಾದುದೆಂದೂ, ಗಂಡನನ್ನು ವಿರೋಧಿಸುವುದು ಉಚ್ಚಧ್ಯೇಯ ಸಾಧನೆಗಾಗಿಯೆ ಎಂದೂ ಹೆಂಡತಿಗೆ ಹೃದ್ಯವಾಗಿದ್ದಲ್ಲಿ ತನ್ನ ಮಾರ್ಗವನ್ನನುಸರಿಸಲು ಅವಳಿಗೆ ಅಧಿಕಾರವಿದೆ. ಮತ್ತು ಹಾಗೆ ಮಾಡುವಾಗ ಎಂಥ ಪ್ರಸಂಗ ಬಂದರೂ ಅದನ್ನು ಅವಳು ಶಾಂತ, ದೃಢ ಚಿತ್ತದಿಂದ ವಿನಮ್ರತೆಯಿಂದ ಎದುರಿಸಬೇಕು. "]

ನನ್ನ ಅಂತಃಶುದ್ಧಿ ಮತ್ತು ಬುದ್ಧಿಮತ್ತೆಯ ವಿಷಯದಲ್ಲಿ ನಸುನಂಬಿಕೆಯುಳ್ಳ ಗೆಳತಿಯೊಬ್ಬಳು ನನಗೆ ಹಲವು ಗಡಚು ಪ್ರಶ್ನೆ ಕೇಳಿದಾಳೆ. ಈ ಪ್ರಶ್ನೆಗಳಿಗೆ ಉತ್ತರವೀಯಲು ನಾನು ಸ್ವಲ್ಪ ಅನುಮಾನಪಡಬೇಕಾಗಿದೆ. ಏಕೆಂದರೆ ತಮ್ಮ ಹಕ್ಕುಗಳ ಬಗ್ಗೆ ತುಂಬ ಸ್ವಾರ್ಥಲೋಲುಪರಾದ ಕೆಲ

ಗಂಡಂದಿರು ಕೋಪಗೊಂಡು ನನ್ನೊಂದಿಗೆ ವಿವಾದವನ್ನು ಹೂಡಬಹುದೆಂಬ ಭೀತಿ ನನಗೆ. ಆದರೆ ಅಲ್ಲೊಂದು ಇಲ್ಲೊಂದು ಅಪಶ್ರುತಿ ಬಿಟ್ಟರೆ ಈ ೪೦ ವರ್ಷಗಳಿಂದ ಸುಖಮಯ ದಾಂಪತ್ಯಜೀವನ ಅನುಭವಿಸಿದ್ದೇನೆಂಬ ವಿಷಯ ಅರಿತು ಈ ಗಂಡಂದಿರು ನನ್ನನ್ನು ದಯಾದೃಷ್ಟಿಯಿಂದ ನೋಡಬಹುದೆಂಬ ಆಸೆಯೂ ಇದೆ ನನಗೆ.

ಅವಳ ಮೊದಲನೆಯ ಪ್ರಶ್ನೆ ಸಮಂಜಸವೂ ಕಾಲೋಚಿತವೂ ಆಗಿದೆ. ಪ್ರಶ್ನೆಗಳ ಮೂಲಭಾಷೆ ಮರಾಠಿ. ಅದರ ಸರಳಾನುವಾದ ಹೀಗಿದೆ:

"ದೇಶಸೇವೆಯಲ್ಲಿ ಭಾಗವಹಿಸದೆ ಕೇವಲ ರಾಮನಾಮಪಠನ ಮಾತ್ರದಿಂದಲೆ ಮೋಕ್ಷ ಸಾಧಿಸಬಹುದೆ? ಈ ಪ್ರಶ್ನೆ ಕೇಳುವ ಕಾರಣ ವಿಷ್ಟೆ: ಕೇವಲ ಗೃಹಕಾರ್ಯಗಳನ್ನು ಮಾಡುವುದು, ಸಂದರ್ಭಾನುಸಾರ ದೀನದರಿದ್ರರಿಗೆ ಸಹಾಯವೀಯುವುದು ಇವೇ ತಮ್ಮ ಧರ್ಮವೆಂತಲೂ ಅದಕ್ಕಿಂತ ಹೆಚ್ಚಿನದೇನೂ ತಾವು ಮಾಡಬೇಕಾಗಿಲ್ಲವೆಂತಲೂ ನನ್ನ ಕೆಲ ಸಹೋದರಿಯರ ಅಭಿಪ್ರಾಯ."

ಈ ಪ್ರಶ್ನೆ ಹೆಂಗುಸರನ್ನಲ್ಲದೆ ಅನೇಕ ಗಂಡಸರನ್ನೂ ತಲ್ಲಣಗೊಳಿಸಿದೆ. ನನ್ನನ್ನಂತೂ ಕಕ್ಕಾವಿಕ್ಕಿಯನ್ನಾಗಿ ಮಾಡಿದೆ. "ಕರ್ಮದ ಜಂಜಾಟವೇಕೆ? ಪುರುಷಪ್ರಯತ್ನ ಯಾವ ಫಲಕ್ಕಾಗಿ? ಎಲ್ಲವೂ ದೈವಾಧೀನವಾದುದು" ಎಂದು ಬೋಧಿಸುವ ಪಂಥವೊಂದಿದೆಯೆಂದು ನಾ ಬಲ್ಲೆ. ಆದರೆ ಆ ಬೋಧನೆಯಲ್ಲಿ ನನಗೆ ವಿಶ್ವಾಸವಿಲ್ಲ. ಒಂದುವೇಳೆ ನಂಬುವುದಾದರೂ ನನ್ನ ವಿಶಿಷ್ಟಾರ್ಥವಿಟ್ಟುಕೊಂಡೇ ನಂಬುವೆ. ವಿಕಾಸಕ್ಕೆ ಪ್ರಯತ್ನ ಅನಿವಾರ್ಯವೇ ಎಂದು ನನ್ನ ನಮ್ರ ಅಭಿಪ್ರಾಯ. ಫಲಕಾರಿಯಾಗಲಿ ಬಿಡಲಿ, ಪ್ರಯತ್ನ ಬೇಕೇಬೇಕು. ರಾಮನಾಮ ಅಥವಾ ಬೇರೊಂದು ಪವಿತ್ರನಾಮ ನಮಗೆ ಅತ್ಯವಶ್ಯ. ಆದರೆ ಪಠನಮಾತ್ರಕ್ಕಾಗಿಯಲ್ಲ–ನಮ್ಮ ಆತ್ಮಶುದ್ಧಿಗಾಗಿ, ನಮ್ಮ ಪ್ರಯತ್ನದ ಸಹಾಯಕ್ಕಾಗಿ, ಮತ್ತು ಪರಮಾತ್ಮನಿಂದ ಮಾರ್ಗದರ್ಶನ ಪಡೆವುದಕ್ಕಾಗಿ. ಆದುದರಿಂದ ಪ್ರಯತ್ನದ ಸ್ಥಾನವನ್ನು ರಾಮನಾಮ ಎಂದೂ ಆಕ್ರಮಿಸಲಾರದು. ರಾಮನಾಮವು ನಮ್ಮ ಪ್ರಯತ್ನವನ್ನು ಹೆಚ್ಚಿಸುವ ಸಾಧನ, ನಮ್ಮ ಮಾರ್ಗ

ದೀಪಿಕೆ. ಪ್ರಯತ್ನ (ಕರ್ಮ) ವ್ಯರ್ಥವೆನ್ನುವುದಾದರೆ ಈ ಗೃಹಕಾರ್ಯವಾದರೂ ಏತಕ್ಕೆ? ದೀನದರಿದ್ರರಿಗೆ ಸಹಾಯವೀಯುವುದಾದರೂ ಯಾವ ಫಲಕ್ಕಾಗಿ? ಈ ಪ್ರಯತ್ನದಲ್ಲಿಯೆ ದೇಶಸೇವೆಯ ಬೀಜಾಣುಗಳಿವೆ. ನನ್ನ ದೃಷ್ಟಿಯಲ್ಲಿ ದೇಶಸೇವೆಯೆ ಮಾನವಸೇವೆ. ಅನಾಸಕ್ತ ಕೌಟುಂಬಿಕ ಸೇವೆಯೂ ಮಾನವಸೇವೆಯೆ ಅಹುದು. ನಿರ್ಲಿಪ್ತಭಾವನೆಯಿಂದೊಡಗೂಡಿದ ಗೃಹಸೇವೆಯೆ ದೇಶಸೇವೆಗೆ ನಮ್ಮನ್ನು ಕರೆದೊಯ್ಯುವುದು. ರಾಮನಾಮ ನಮ್ಮಲ್ಲಿ ಅನಾಸಕ್ತಿಭಾವವನ್ನು ಹುಟ್ಟಿಸುವುದು, ಮನವನ್ನು ನಿಗ್ರಹಿಸುವುದು; ಎಂಥ ಸಂಕಟದಲ್ಲಿಯೂ ನಾವು ಧೃತಿಗೆಡದಂತೆ ನೋಡಿಕೊಳ್ಳುವುದು. ದರಿದ್ರನಾರಾಯಣನ ಸೇವೆಯಿಲ್ಲದೆ ಆತ್ಮಸಾಕ್ಷಾತ್ಕಾರ ಅಸಾಧ್ಯವೆಂದು ನನ್ನ ನಂಬುಗೆ.

**ಎರಡನೆಯ ಪ್ರಶ್ನೆ**:—"ಗಂಡ ನೀಚನೆ ಇರಲಿ, ಪ್ರೇಮದ ಪುತ್ಥಳಿಯೆ ಇರಲಿ, ಪತಿಗಾಗಿ ಸರ್ವವನ್ನೂ ಸಮರ್ಪಿಸುವ ಪತಿಪರಾಯಣತೆಯೆ ಪತ್ನಿಯ ಸರ್ವಶ್ರೇಷ್ಠವಾದ ಗುರಿಯೆಂದು ಹಿಂದೂಧರ್ಮಶಾಸ್ತ್ರದಲ್ಲಿ ಹೇಳಿದೆ. ಹೆಂಡತಿಯ ಧರ್ಮಮಾರ್ಗ ಇದುವೆ ಆಗಿದ್ದಪಕ್ಷದಲ್ಲಿ ಅವಳು ತನ್ನ ಗಂಡನ ವಿರೋಧವನ್ನು ಲೆಕ್ಕಿಸದೆ ದೇಶಸೇವೆಯಲ್ಲಿ ಭಾಗವಹಿಸಬಹುದೆ? ಅಥವಾ ಗಂಡಹಾಕಿದ ಗೆರೆಯಲ್ಲಿಯೆ ಉಳಿದು ಸಾಧ್ಯವಾದಷ್ಟು ಸೇವೆ ಸಲ್ಲಿಸಬೇಕೆ?"

ನನ್ನ ದೃಷ್ಟಿಯಲ್ಲಿ ಸೀತಾದೇವಿಯೆ ಆದರ್ಶಪತ್ನಿ, ಶ್ರೀರಾಮನೆ ಆದರ್ಶಪತಿ. ಆದರೆ ಸೀತಾದೇವಿ ರಾಮನ ದಾಸಿಯಾಗಿರಲಿಲ್ಲ. ಅಥವಾ ಅವರು ಪರಸ್ಪರರ ದಾಸರಾಗಿದ್ದರು. ಸೀತೆಯ ವಿಷಯದಲ್ಲಿ ರಾಮನು ತುಂಬ ವಿವೇಕದಿಂದ ವರ್ತಿಸುತ್ತಿದ್ದ. ನೈಜ ಪ್ರೇಮವಿದ್ದಲ್ಲಿ ಈ ಮೇಲಿನ ಪ್ರಶ್ನೆಯೆ ಏಳುವುದಿಲ್ಲ. ಪ್ರೇಮವಿಲ್ಲದಲ್ಲಿ ಎಲ್ಲಿಯ ಬಂಧನ? ಆದರೆ ಇಂದಿನ ಹಿಂದೂಗೃಹಸ್ಥಜೀವನ ಒಂದು ದೊಡ್ಡ ಒಗಟಾಗಿದೆ. ಮದುವೆಯಾದಾಗ ಗಂಡಹೆಂಡರಿಗೆ ಪರಸ್ಪರ ವಿಷಯವಾಗಿ ಏನೂ ಗೊತ್ತಿರುವುದಿಲ್ಲ. ಸಂಪ್ರದಾಯಬದ್ಧ ಧಾರ್ಮಿಕಶಾಸನ ಮತ್ತು ದಂಪತಿಗಳ ಸುಗಮಜೀವನ ಇವೇ ನಮ್ಮ ಹಿಂದೂಧರ್ಮದ ಗೃಹಶಾಂತತೆಗೆ ಮೂಲಕಾರಣ. ಆದರೆ

ದಂಪತಿಗಳಲ್ಲಿ ಯಾರಾದರೊಬ್ಬರು ಸರ್ವಸಾಮಾನ್ಯವಾದ ಆಚಾರವಿಚಾರಗಳ ವಿಷಯದಲ್ಲಿ ವಿರುದ್ಧಾಭಿಪ್ರಾಯವುಳ್ಳವರಾದರೆ ಗಂಡನು ತನಗೆ ಸರಿದೋರಿದಂತೆ ಮಾಡುವ. ಏಕೆಂದರೆ ತನ್ನ ಜೀವನದ ಜೊತೆಗಾರ್ತಿಯೊಂದಿಗೆ ವಿಚಾರ ವಿನಿಮಯ ಮಾಡಲೇಬೇಕೆಂಬ ಯಾವ ಹಂಗೂ ತನ್ನ ಮೇಲಿಲ್ಲವೆಂದು ಅವನ ಭಾವನೆ. ಹೆಂಡತಿ ತನ್ನ ಸ್ವತ್ತು ಎಂದು ಆತ ತಿಳಿಯುತ್ತಾನೆ. ಆದರೆ ಪಾಪ, ತನ್ನಮೇಲೆ ಗಂಡನಿಗೆ ಸರ್ವಾಧಿಕಾರವಿದೆಯೆಂದು ಆ ಹೆಂಡತಿಯೂ ನಂಬಿ, ತನ್ನ ಸ್ವಂತ ವಿಚಾರಗಳನ್ನು ಹತ್ತಿಕ್ಕುವಳು. ಇಂಥ ಪರಿಸ್ಥಿತಿಯಿಂದ ಪಾರಾಗಲು ಅವಳಿಗೂ ಒಂದು ಮಾರ್ಗವಿದೆ. ಮೀರಾಬಾಯಿ ಅದನ್ನು ಎಲ್ಲರಿಗೂ ತೋರಿದಾಳೆ. ತನ್ನ ಮಾರ್ಗ ಸರಿಯಾದುದೆಂದೂ, ಪತಿಯನ್ನು ವಿರೋಧಿಸುವುದು ಉಚ್ಚಧ್ಯೇಯ ಸಾಧನೆಗಾಗಿಯೆಂದೂ ಹೆಂಡತಿಗೆ ಹೃದ್ಯವಾಗಿದ್ದಲ್ಲಿ ತನ್ನ ಮಾರ್ಗವನ್ನೆ ಅನುಸರಿಸಲು ಅವಳಿಗೆ ಸಂಪೂರ್ಣ ಅಧಿಕಾರವಿದೆ ಹಾಗೆ ಮಾಡುವಲ್ಲಿ ಎಂಥ ಪ್ರಸಂಗಬಂದರೂ ಅದನ್ನು ಅವಳು ಶಾಂತ ದೃಢಚಿತ್ತದಿಂದ ವಿನಮ್ರತೆಯಿಂದ ಎದುರಿಸಲೇಬೇಕು.

ಮೂರನೆಯ ಪ್ರಶ್ನೆ :— "ಗಂಡ ಮಾಂಸಾಹಾರಿಯಾಗಿದ್ದು, ಮಾಂಸಾಹಾರ ಒಂದು ಅಸಿಷ್ಟವೆಂದು ಹೆಂಡತಿ ಭಾವಿಸಿದರೆ ಅವಳು ತನಗೆ ಸರಿದೋರಿದಂತೆ ನಡೆಯಬೇಕೆ? ಅಥವಾ ಗಂಡನ ಮಾಂಸಾಹಾರ ಇತ್ಯಾದಿ ಕೆಟ್ಟ ಚಟಗಳನ್ನು ಬಿಡಿಸಲು ಪ್ರೀತಿಯ ಎಲ್ಲ ರೀತಿಗಳಿಂದಲೂ ಪ್ರಯತ್ನಿಸಬೇಕೆ? ಅವಳು ಗಂಡನಿಗಾಗಿ ಮಾಂಸದ ಅಡುಗೆ ಬೇಯಿಸಬೇಕೆ? ಅದಕ್ಕೂ ಅನಿಷ್ಟವಾದುದೇನೆಂದರೆ ಗಂಡ ಒತ್ತಾಯಪಡಿಸಿದರೆ ಅವಳು ಮಾಂಸದ ಅಡುಗೆ ಉಣಬೇಕೆ? ಹೆಂಡತಿಯು ತನ್ನ ಮಾರ್ಗವನ್ನೆ ಅನುಸರಿಸಬೇಕೆಂದು ನೀವು ಉಪದೇಶಿಸಿದರೆ ಪರಸ್ಪರ ವಿರುದ್ಧ ಸ್ವಭಾವದ ಈ ದಂಪತಿಗಳು ಒಂದೆಡೆಯಲ್ಲಿ ಸಂಸಾರ ಸಾಗಿಸುವುದು ಸಾಧ್ಯವೆ?"

ಈ ಪ್ರಶ್ನೆಗೆ ಎರಡನೆಯ ಉತ್ತರದಲ್ಲಿಯೆ ಅರ್ಧ ಉತ್ತರವಿತ್ತಂತಾಗಿದೆ. ಪತಿಯ ಪಾಪಕೃತ್ಯಗಳಲ್ಲಿ ಪತ್ನಿಯೂ ಪಾಲುಗಾರಳಾಗಬೇಕೆಂದಿಲ್ಲ. ಗಂಡ ಹೊಲ್ಲದ ಕೆಲಸ ಮಾಡುತ್ತಾನೆಂದು ಅವಳಿಗೆನಿಸಿದರೆ ಅವನನ್ನೆದುರಿಸಿ, ತನಗೆ ಸರಿದೋರಿದಂತೆ ನಡೆಯಲು ಅವಳು ಹಿಂಜರಿಯ

ಕೂಡದು. ಸಂಪಾದಿಸಿ ತರುವುದು ಗಂಡನ ಕರ್ತವ್ಯವಾಗಿರುವಂತೆ ಗೃಹಭಾರ ತೂಗಿಸಿಕೊಂಡು ಹೋಗುವುದು ಮಡದಿಯ ಕರ್ತವ್ಯವಾಗಿದೆ. ಎಂದರೆ ದಂಪತಿಗಳು ಮೊದಲಿನಿಂದಲೂ ಮಾಂಸಾಹಾರಿಗಳಾಗಿದ್ದರೆ ಗಂಡನಿಗಾಗಿ ಮಾಂಸಅಡುಗೆ ಮಾಡುವುದು ಪತ್ನಿಯ ಕರ್ತವ್ಯ. ಆದರೆ ಶಾಕಾಹಾರಿ ಮನೆತನಗಳಲ್ಲಿ ಗಂಡ ಮಾಂಸಾಹಾರಿಯಾಗಿ ಮಾಂಸದಡುಗೆ ಮಾಡಲು ಹೆಂಡತಿಯನ್ನು ಒತ್ತಾಯಪಡಿಸಿದರೆ ತನ್ನ ಧರ್ಮಭಾವನೆಗೆ ಪೆಟ್ಟುಬೀಳುವ ಕಾರ್ಯವನ್ನು ಅವಳು ಮಾಡಬೇಕೆಂದಿಲ್ಲ. ಗೃಹಶಾಂತಿ ಕಾಯುವುದು ಅತ್ಯವಶ್ಯವೆಂಬುದು ನಿಜ. ಆದರೆ ಅದುವೆ ಮುಖ್ಯ ಗುರಿಯಲ್ಲ. ಜೀವನದಲ್ಲಿಯ ಇತರ ಅವಸ್ಥೆಗಳಂತೆ ವಿವಾಹಾವಸ್ಥೆಯೂ ಒಂದು ಕಟ್ಟುಪಾಡು, ಒಂದು ವ್ಯವಸ್ಥೆ. ಜೀವನವೆಂದರೆ ಒಂದು ಕರ್ತವ್ಯ, ಒಂದು ಪರೀಕ್ಷೆ. ಇಹಪರಗಳೆರಡರಲ್ಲಿಯೂ ಪರಸ್ಪರ ಹಿತಬಯಸುವುದೆ ದಾಂಪತ್ಯಜೀವನದ ಯಥಾರ್ಥ ಉದ್ದೇಶ ಅದು ಮಾನವ ಸೇವೆಯೂ ಅಹುದು. ಇವರಲ್ಲೊಬ್ಬರು ಈ ಕಟ್ಟುಪಾಡು ಮುರಿದರೆ ಮತ್ತೊಬ್ಬರಿಗೆ ಈ ಬಂಧನವನ್ನು ಹರಿದೊಗೆವ ಹಕ್ಕು ಪ್ರಾಪ್ತವಾದಂತೆಯೇ ಸರಿ. ಈ ಒಡಕು ನೈತಿಕ ಬಂಧನಕ್ಕೆ ಸಂಬಂಧಪಟ್ಟುದಲ್ಲದೆ ಶಾರೀರಿಕ ಬಂಧನಕ್ಕಲ್ಲ. ಆದುದರಿಂದ ಇಲ್ಲಿ ವಿವಾಹವಿಚ್ಛೇದನದ ಪ್ರಶ್ನೆಯೆ ಏಳಲಾರದು. ಯಾವ ಧ್ಯೇಯ ಸಾಧನೆಗಾಗಿ ಅವರು ಒಂದುಗೂಡಿದ್ದರೊ ಅದೇ ಸಾಧನೆಗಾಗಿ ಈಗ ಅವರು ದೂರ ಸರಿಯುತ್ತಾರೆ. ಅವರಿಬ್ಬರೂ ಸರಿಸಮಾನರೆಂಬ ತತ್ತ್ವವನ್ನು ಹಿಂದೂಧರ್ಮ ಸಾರಿದೆ. ಆದರೆ ಈಗ ನಾವು ಆಚರಣೆಯಲ್ಲಿ ಕಾಣುವುದು ತತ್ತ್ವಕ್ಕೆ ವಿಪರೀತವಾಗಿದೆಯೇನೊ ನಿಜ. ಈ ಬಗೆಯ ಆಚರಣೆ ಎಂದು ತಲೆಯೆತ್ತಿತೊ ನಾವು ಬೇರೆ ಕಾಣೆವು. ಹೀಗೆಯೆ ಇನ್ನೂ ಅನೇಕ ಅನಿಷ್ಟ ಸಂಪ್ರದಾಯಗಳೂ ನಮ್ಮಲ್ಲಿ ಒಳನುಗ್ಗಿವೆ. ಇರಲಿ, ಪ್ರತಿಯೊಬ್ಬ ಸ್ತ್ರೀಯ ಇಲ್ಲವೆ ಪುರುಷನ ಜನ್ಮಧಾರಣೆ ಕೇವಲ ಆತ್ಮಸಾಕ್ಷಾತ್ಕಾರಕ್ಕಾಗಿ, ಮೋಕ್ಷ ಸಾಧನೆಗಾಗಿ. ಆದರೆ ಆ ಸಾಧನೆಗಾಗಿ ತಮಗೆ ಸರಿದೋರಿದ ಮಾರ್ಗವನ್ನನುಸರಿಸಲು ಹಿಂದೂಧರ್ಮವು ಸತಿಪತಿಗಳಿಗೆ ಸಂಪೂರ್ಣ ಸ್ವಾತಂತ್ರ್ಯ ಕೊಟ್ಟಿದೆಯೊ ಇಲ್ಲವೊ ನಾನರಿಯೆ.

ಯಂಗ್ ಇಂಡಿಯಾ, ೨೧-೧೦-೧೯೨೬

# ಸ್ತ್ರೀಯರೂ ವರ್ಣಗಳೂ

[ "ವರ್ಣವೆಂದರೆ ಹಕ್ಕು-ಅಧಿಕಾರಗಳ ಕಟ್ಟು ಎಂಬ ಅರ್ಥವಲ್ಲ. ಅದು ನಮ್ಮ ಕರ್ತವ್ಯಕರ್ಮಗಳನ್ನು ಸೂಚಿಸುತ್ತದೆ ..................... ತನಗೆ ಸಮಾಜದಲ್ಲಿ ಎಂಥ ಗೌರವಸ್ಥಾನವಿದೆಯೆಂಬುದನ್ನು ತನ್ನ ಕರ್ತವ್ಯವನ್ನರಿತು ಪಾಲಿಸುವ ಸ್ತ್ರೀಯಳೇ ಬಲ್ಲಳು. ಅವಳು ತನ್ನ ಕುಟುಂಬದ ರಾಣಿ,: ದಾಸಿಯಲ್ಲ". ]

ಮಾನ್ಯಮಿತ್ರರೊಬ್ಬರು ಹೀಗೆ ಬರೆದಿದಾರೆ :

"ನೀವು ಇತ್ತೀಚೆ ವರ್ಣದ ವಿಷಯವಾಗಿ ಬರೆದ ಲೇಖನಗಳನ್ನು ನೋಡಿದರೆ ನಿಮ್ಮ ವರ್ಣಾಶ್ರಮಧರ್ಮತತ್ವ ಕೇವಲ ಪುರುಷರಿಗೆ ಅನ್ವಯಿಸುವಂತೆ ತೋರುತ್ತಿದೆ. ಹಾಗಾದರೆ ಸ್ತ್ರೀಯರ ವಿಷಯವೇನು ? ಸ್ತ್ರೀಯರ ವರ್ಣವನ್ನು ನಿರ್ಧರಿಸುವ ಬಗೆ ಹೇಗೆ ? ಮದುವೆಯ ಮೊದಲು ಹೆತ್ತವರ, ಅನಂತರ ಗಂಡನ ವರ್ಣವೆ ಅವಳದಾಗುತ್ತದೆಂದು ಬಹುಶಃ ನೀವು ಹೇಳಬಹುದು. ಹಾಗಾದರೆ ತನ್ನ ಜೀವನದ ಯಾವ ಅವಸ್ಥೆಯಲ್ಲಿಯೂ ಸ್ತ್ರೀಗೆ ಸ್ವತಂತ್ರ ಅಸ್ತಿತ್ವವೆ ಇಲ್ಲ ; ಮದುವೆಯ ಮೊದಲು ಹೆತ್ತವರ ರಕ್ಷಣೆಯಲ್ಲಿ, ಬಳಿಕ ಗಂಡನ ರಕ್ಷಣೆಯಲ್ಲಿ ಮತ್ತು ವಿಧವೆಯಾದಲ್ಲಿ ಮಕ್ಕಳ ರಕ್ಷಣೆಯಲ್ಲಿ ಅವಳಿರಬೇಕೆಂಬ ಮನುವಿನ ವಿಚಿತ್ರಶಾಸನವನ್ನು ನೀವು ಎತ್ತಿಹಿಡಿಯುವಿರೆಂದು ನಾವು ಭಾವಿಸಬೇಕೆ ?

ಅದೇನೆ ಇರಲಿ ; ಈ ಯುಗ ಸ್ತ್ರೀಯರಿಗೂ ಮತಾಧಿಕಾರವಿದೆಯೆಂದು ಒಪ್ಪಿದೆ. ಅಲ್ಲದೆ ಇಂದು ಸ್ತ್ರೀಯೂ ಸ್ವತಂತ್ರಜೀವನೋಪಾರ್ಜನ ವೃತ್ತಿಗಳಲ್ಲಿ ಧುಮುಕಿ ಗಂಡಸಿನ ಜೊತೆಗೆ ಸರಿಸಮಾನಳಾಗಿ ನಿಂತಿದಾಳೆ. ಈ ಕಾರಣ, ಹೆಂಡತಿ ಶಿಕ್ಷಿಕಾವೃತ್ತಿ ಮಾಡಿದರೆ ಅವಳ ಗಂಡ ಕುಸೀದಕ (Banking) ವೃತ್ತಿ ಮಾಡುತ್ತಿರುವ ದೃಷ್ಟಾಂತ ಈಗ ಎಲ್ಲೆಲ್ಲೂ ಸರ್ವಸಾಮಾನ್ಯವಾಗಿ ಕಾಣಬರುತ್ತಿವೆ. ಇಂಥ ಸಂದರ್ಭಗಳಲ್ಲಿ ಆ ಹೆಂಗುಸಿನ ವರ್ಣವಾವುದು ? ವರ್ಣಾಶ್ರಮದಂತೆ ಗಂಡಸು ಪರಂಪರಾಗತವೃತ್ತಿಯನ್ನೆ ಮಾಡುವುದರಿಂದ ಆತ ತಂದೆಯ ವರ್ಣವನ್ನೆ ಹೊಂದುತ್ತಾನೆ. ಹೆಂಣು ಕನ್ನ ತಂದೆಯ ವರ್ಣ ಹೊಂದುತ್ತಾಳೆ. ಮದುವೆಯಾದ ಮೇಲೂ ಸ್ತ್ರೀ

ಪುರುಷರು ತಮ್ಮ ತಮ್ಮ ವರ್ಣಗಳಿಗೆ ಅಂಟಿಕೊಳ್ಳುತ್ತಾರೆನ್ನೋಣ. ಆದರೆ ಇವರ ಸಂತತಿಯು ವರ್ಣವಾವುದು ? ಅಥವಾ ತಮ್ಮಿಚ್ಛೆಗೆ ಸರಿದೋರಿದಂತೆ ತಮ್ಮ ವರ್ಣ ನಿರ್ಣಯಿಸಲು ಮಕ್ಕಳಿಗೆ ಬಿಡಬೇಕೆ ? ಹಾಗಾದರೆ ನೀವು ವಿವರಿಸಿದ ವರ್ಣಾಶ್ರಮಧರ್ಮದ ಮೂಲತತ್ತ್ವವಾದ ಆನುವಂಶಿಕ ತತ್ತ್ವದ ಗತಿಯೇನು ? ”

ಈಗಣ ಪರಿಸ್ಥಿತಿಯಲ್ಲಿ ಈ ಪ್ರಶ್ನೆಯೆ ಸಮಂಜಸವಾಗಲಾರದೆಂದು ನನ್ನ ಅಭಿಪ್ರಾಯ. ಈಗಿನ ಕಾಲದಲ್ಲಿ ವರ್ಣಸಾಂಕರ್ಯದ ಮೂಲಕ ನಿಜವಾದ ವರ್ಣಗಳೆ ಉಳಿದಿಲ್ಲ ; ವರ್ಣತತ್ವವೆಂದೂ ನಿರ್ವೀರ್ಯವಾಗಿದೆ ಯೆಂದು ನಾನೀಗಲೆ ಸ್ಪಷ್ಟವಾಗಿ ಬರೆದಿದೇನೆ. ಈಗಿನ ಹಿಂದೂಧರ್ಮದ ಸ್ಥಿತಿ ಅರಾಜಕತೆಯ ಸ್ಥಿತಿ ; ಚಾತುರ್ವರ್ಣ್ಯಗಳು ಉಳಿದುದು ಹೆಸರಿನಲ್ಲಿ ಮಾತ್ರ. ವರ್ಣದಲ್ಲಿಯೆ ಮಾತನಾಡಬೇಕಿದ್ದರೆ, ನಮ್ಮೆಲ್ಲರ—ಗಂಡು ಹೆಣ್ಣುಗಳ—ವರ್ಣ ಒಂದೆ. ನಾವೆಲ್ಲರೂ ಶೂದ್ರರಾಗಿದೇವೆ.

ಪುನರುಜ್ಜೀವನಗೊಳ್ಳುವ ನನ್ನ ಈ ವರ್ಣಾಶ್ರಮಧರ್ಮದಲ್ಲಿ ಹುಡುಗಿಯ ವರ್ಣ ಮದುವೆಯ ವೊದಲು, ಅಣ್ಣನಂತೆ ತಂದೆಯದೆ ವರ್ಣ. ಈ ಧರ್ಮದಲ್ಲಿ ಮಿಶ್ರವಿವಾಹ ವಿರಳವೆಂದೆನ್ನಬಹುದು. ಆದುದ ರಿಂದ ಮದುವೆಯಾದಮೇಲೂ ಹುಡುಗಿಯ ವರ್ಣ ಬದಲಾಗಲಾರದು. ಒಂದುವೇಳೆ ಗಂಡನ ವರ್ಣ ಬೇರೆಯಾದ ಪಕ್ಷವಲ್ಲಿ ಅವಳು ತನ್ನ ತಂದೆಯ ವರ್ಣ ತೊರೆದು ಗಂಡನ ವರ್ಣ ಹೊಂದುವಳು. ಈ ವರ್ಣಬದಲಾವಣೆ ತಮ್ಮ ವರ್ಣಕ್ಕೆ ಕುಂದೆಂದು ತಿಳಿದು ಮನೋವೇದನೆ ಪಡುವುದು ತೀರ ತಪ್ಪು. ಏಕೆಂದರೆ ವರ್ಣಾಶ್ರಮಧರ್ಮದ ಪುನರುಜ್ಜೀವನ ಕಾಲದಲ್ಲಿ ಈ ಚಾತುರ್ವರ್ಣ್ಯಗಳು ಸಮಷ್ಟಿಭಾವನೆಯಿಂದಲೆ ನೋಡಲ್ಪಡುವವು.

ಹೆಂಡತಿ ಗಂಡನ ವೃತ್ತಿಗೆ ತೀರ ಭಿನ್ನವಾದ ವೃತ್ತಿ ಕೈಕೊಳ್ಳ ಬೇಕೆಂದು ನಾನೆಂದೂ ಆಶಿಸುವುದಿಲ್ಲ. ಅವಳ ಎಲ್ಲ ಶಕ್ತಿ, ಸಮಯ ವ್ಯಯಿಸುವುದಕ್ಕೆ ಮಕ್ಕಳ ಆರೈಕೆ ಗೃಹಕಾರ್ಯಗಳ ಭಾರವೆ ಸಾಕು. ಸುವ್ಯವಸ್ಥಿತ ಸಮಾಜದಲ್ಲಿ ಕುಟುಂಬ ಪೋಷಣೆಯ ಹೆಚ್ಚಿನ ಭಾರ ಅವಳ ಮೇಲೆ ಹೇರುವುದು ತಪ್ಪು. ಗಂಡಸು ಕುಟುಂಬಪೋಷಣೆಯ ಕಾರ್ಯ

ವಹಿಸಬೇಕು. ಹೆಂಗುಸು ಗೃಹಭಾರ ತೂಗಿಸಿಕೊಂಡು ಹೋಗಬೇಕು. ಹೀಗೆ ಅವರ ಕಾರ್ಯ ಪರಸ್ಪರ ಪೂರಕಗಳಾಗಬೇಕು.

ಈ ರೀತಿಯ ವ್ಯವಹರಣೆಯನ್ನಿಟ್ಟುಕೊಂಡರೆ ಹೆಂಗುಸಿನ ಹಕ್ಕು ಬಾಧ್ಯತೆಗಳ ಮೇಲೆ ದಾಳಿ ಇಲ್ಲವೆ ಅವಳ ಸ್ವಾತಂತ್ರ್ಯಾಪಹರಣ ಎಂಬ ಅಪವಾದಕ್ಕೆ ದಾರಿಯೆಲ್ಲಿ? "ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲ" ವೆಂದು ಹೇಳುವ ಮನುಸ್ಮೃತಿಯ ಹೇಳಿಕೆ ನನಗೆ ಸರ್ವಥಾ ಮಾನ್ಯವಿಲ್ಲ. ಆ ಕಟ್ಟಳೆಯಿದ್ದ ಕಾಲದಲ್ಲಿ ಸ್ತ್ರೀಯರಿಗೆ ಸ್ವಾತಂತ್ರ್ಯವಿದ್ದಿಲ್ಲವೆಂದಿಷ್ಟೆ ಅದು ಸೂಚಿಸುತ್ತದೆಂದು ನನ್ನ ಅಭಿಪ್ರಾಯ. ನಮ್ಮ ಹಿಂದಿನ ಸಾಹಿತ್ಯದಲ್ಲಿ ಹೆಂಡತಿಯನ್ನು 'ಅರ್ಧಾಂಗಿನಿ' 'ಸಹಧರ್ಮಿಣಿ' ಯೆಂದು ಗೌರವವಾಗಿ ಕಂಡಿದಾರೆ. ಹೆಂಡತಿಯನ್ನು 'ದೇವಿ' ಯೆಂದು ಗಂಡ ಸಂಬೋಧಿಸುತಿದ್ದ ಕಾಲದಲ್ಲಿ ಸ್ತ್ರೀಯರನ್ನು ಅವಜ್ಞಾದೃಷ್ಟಿಯಿಂದ ನೋಡುತಿದ್ದರೆಂದು ಹೇಗೆ ಹೇಳಲಾದೀತು? ಮಧ್ಯಂತರದಲ್ಲಿ ದುರ್ದೈವದಿಂದ ಕಾಲಗತಿಯು ಬದಲಾಗಿ ಹಿಂದೂ ಸ್ತ್ರೀಯು ತನ್ನ ಹಕ್ಕುಗಳಿಂದ ವಂಚಿತಳಾಗಿ ಗೌಣಸ್ಥಿತಿಗೆ ಇಳಿದಳು. ಆದರೆ ಅವಳ ವರ್ಣವನ್ನು ಯಾರೂ ಕೀಳುಗೈಯುವಂತಿಲ್ಲ. ಏಕೆಂದರೆ ವರ್ಣವೆಂದರೆ ಹಕ್ಕು ಅಧಿಕಾರಗಳ ಕಟ್ಟಲ್ಲ; ಅದು ಕರ್ತವ್ಯ ಕರ್ಮಗಳನ್ನು ಸೂಚಿಸುವುದು. ನಮ್ಮ ಕರ್ತವ್ಯಲೋಲುಪತೆಗೆ ನಮ್ಮ ಅಸಡ್ಡೆಯೆ ಕಾರಣವಲ್ಲದೆ ಬೇರೇನೂ ಅಲ್ಲ. ತನಗೆ ಸಮಾಜದಲ್ಲಿ ಎಂಥ ಗೌರವಸ್ಥಾನವಿದೆಯೆಂಬುದನ್ನು ತನ್ನ ಕರ್ತವ್ಯವನ್ನರಿತು ಪಾಲಿಸುವ ಸ್ತ್ರೀಯಳೇ ಬಲ್ಲಳು. ಅವಳು ತನ್ನ ಕುಟುಂಬದ ರಾಣಿ, ದಾಸಿಯಲ್ಲ.

ಸಮಾಜದಲ್ಲಿ ಸ್ತ್ರೀಯರ ಸ್ಥಾನದ ವಿಷಯವಾಗಿ ನಾನು ಹಾಕಿದ ಕ್ರಮ ಜನ ಒಪ್ಪಿದಲ್ಲಿ ಸಂತತಿಯ ವಿಷಯವಾಗಿ ಯಾವ ಸಮಸ್ಯೆಯೂ ತಲೆಯೆತ್ತಲಾರದು. ಏಕೆಂದರೆ ದಂಪತಿಗಳ ವರ್ಣದ ವಿಷಯದಲ್ಲಿ ಉಚ್ಚನೀಚವೆಂಬ ಭೇದಕ್ಕೆ ಎಡೆಯೆ ಉಳಿಯಲಾರದು.

ಹರಿಜನ, ೧೨-೧೦-೧೯೩೪

# ಸ್ತ್ರೀಯರ ಸ್ಥಾನ

[ " ಹೆಂಗುಸಿನ ಹಕ್ಕು-ಬಾಧ್ಯತೆಗಳ ವಿಷಯದಲ್ಲಿ ಕುಂದು ತರುವಂತಹ ಯಾವ ಒಪ್ಪಂದಕ್ಕೂ ನಾನು ಸಿದ್ಧನಿಲ್ಲ. ಕಾಯದೆಯಲ್ಲಿ ಗಂಡುಹೆಣ್ಣು ಎಂಬ ಭೇದಭಾವವಿರಕೂಡದೆಂದೇ ನನ್ನ ಮತ. ಹೆಣ್ಣುಗಂಡೆಂಬ ಭೇದಭಾವವಿಲ್ಲದೆ ಎಲ್ಲ ಮಕ್ಕಳನ್ನೂ ಸಮದೃಷ್ಟಿ ಸಮಭಾವನೆಯಿಂದ ನಾವು ನೋಡಬೇಕು " ]

ಮದುವೆಯ ಮೋಹಕ್ಕೊಳಗಾಗದೆ ವಿವಾಹೇಚ್ಛೆಯನ್ನು ಇದುವರೆಗೂ ಯಶಸ್ವಿಯಾಗಿ ನಿಗ್ರಹಿಸಿದ ಗೆಳತಿಯೊಬ್ಬಳು ನನಗೆ ಹೀಗೆ ಬರೆದಿದಾಳೆ :

" ನಿನ್ನೆಯ ದಿನ ಮಲೆಬಾರಿ ಮಂದಿರದಲ್ಲಿ (ಮುಂಬಯಿ) ಸ್ತ್ರೀ ಪರಿಷತ್ತು ಜರುಗಿತು. ಅನೇಕರು ಸೊಗಸಾದ ಭಾಷಣಗಳನ್ನಿತ್ತರು. ಅಲ್ಲದೆ ಅನೇಕ ಗೊತ್ತುವಳಿಗಳೂ ಪಾಸುಮಾಡಲ್ಪಟ್ಟವು. ನಿನ್ನೆಯ ವಿಷಯ ' ಶಾರದಾ ಬಿಲ್ಲಿ ' ನ ಕುರಿತಾಗಿತ್ತು. ಹೆಣ್ಣುಮಕ್ಕಳ ಮದುವೆಯ ವಯೋಮಾನ ಕನಿಷ್ಟ ೧೮ ಇರಬೇಕೆಂಬ ವಿಚಾರವನ್ನು ನೀವು ಎತ್ತಿ ಹಿಡಿದುದಕ್ಕಾಗಿ ನಾವು ತುಂಬ ಋಣಿಯಾಗಿದೇವೆ. ನಾವು ನಿನ್ನೆ ಚರ್ಚಿಸಿದ ಮತ್ತೊಂದು ಗೊತ್ತುವಳಿಯ ವಿಷಯವೇನೆಂದರೆ, ವಾರಸಾಹಕ್ಕಿನ ಕಾಯಿದೆ ವಿಷಯ. ಈ ವಿಷಯವಾಗಿ ನೀವು ' ನವಜೀವನ ' ಇಲ್ಲವೆ " ಯಂಗ್ ಇಂಡಿಯಾ " ಪತ್ರಿಕೆಯಲ್ಲಿ ಸ್ವಲ್ಪ ಒತ್ತಿ ಬರೆದರೆ ಅದರಿಂದ ನಮಗೆ ಅಲಭ್ಯ ಲಾಭವಾಗುವುದು. ತಮ್ಮ ಜನ್ಮಸಿದ್ಧ ಹಕ್ಕುಗಳನ್ನು ಮರಳಿ ಪಡೆಯಲು ಸ್ತ್ರೀಯರೇಕೆ ಕೈಯೊಡ್ಡಬೇಕು ? ಏಕೆ ಹೋರಾಡಬೇಕು ? ಹೆಂಣಿನ ಹೊಟ್ಟೆಯಲ್ಲಿ ಹುಟ್ಟಿದ ಗಂಡು ' ಅಬಲೋದ್ಧಾರ ' ದ ವಿಷಯವಾಗಿ ದೊಡ್ಡ ದೊಡ್ಡ ಮಾತುಗಳನ್ನಾಡುವುದು, ನಮ್ಮ ಹಕ್ಕುಗಳನ್ನು ನಮಗೆ ಕೊಡಲು ಆಢ್ಯತೆಯಿಂದ ನಮ್ರವಚನವೀಯುವುದು ಇದೆಲ್ಲವೂ ಸೋಜಿಗದ ಬಗೆ ! ಅದೇಕೆ, ಹೊಗೆಯನ್ನೆ ಹೊತ್ತಿಸುವ ನಗೆಯುಳ್ಳ ರುದ್ರ ಪ್ರಹಸನವೆ ಸರಿ. ಯಾವ ಅಬಲೆಯರಿಂದ ಅವರ ನೈಜ ಹಕ್ಕುಗಳನ್ನು ತಮ್ಮ ಪಶುಬಲದಿಂದ ಕಿತ್ತುಕೊಂಡಿದಾರೊ ಅದನ್ನು ಈ ಸಬಲರು ಮರಳಿಸುವುದರಲ್ಲಿ ಔದಾರ್ಯವೇನು ? ಪುರುಷಾರ್ಥವೆಲ್ಲಿಯದು ? ಹೆಂಣು

ಗಂಡಿಗಿಂತ ಯಾವ ವಿಷಯದಲ್ಲಿ ಕೀಳು? ಹಾಗಾದರೆ ವಾರಸಾಹಕ್ಕಿನಲ್ಲಿ ಗಂಡಿಗಿಂತ ಹೆಂಣಿಗೆ ಹಕ್ಕು ಕಡಮೆ ಏಕೆ? ಅದೇಕೆ ಅವರು ಸರಿಪಾಲುಗೊಳ್ಳ ಕೂಡದು? ಕೆಲದಿನಗಳ ಹಿಂದೆ ಈ ವಿಷಯವಾಗಿ ಕೆಲ ಮಿತ್ರರೊಡನೆ ತುಸು ತುರುಸಿನ ವಾದವೆ ನಡೆಯಿತು. ಆಗ ಒಬ್ಬ ಮಹಿಳೆ ಹೀಗೆ ಹೇಳಿದಳು: "ನಮಗೆ ಕಟ್ಟಳೆಗಳಲ್ಲಿ ಯಾವ ಮಾರ್ಪಾಟೂ ಅಗತ್ಯವಿಲ್ಲ. ನಾವು ತುಂಬ ತೃಪ್ತಿಯಿಂದ ಇದೇವೆ. ಅಲ್ಲದೆ ಗಂಡುಸಂತತಿಯೆ ಕುಟುಂಬದ ಆಧಾರಸ್ತಂಭ. ಮನೆತನದ ಎಲ್ಲ ಭಾರ, ಎಲ್ಲ ಪ್ರತಿಷ್ಠೆ ಅವನ ಮೇಲೆ ಇದೆ. ಆತನೆ ಅದರ ರಕ್ಷಕ. ಆದುದರಿಂದ ಅವನಿಗೆ ಹೆಚ್ಚಿನ ಹಕ್ಕಿರುವುದು ನ್ಯಾಯವಾದುದು." "ಹಾಗಾದರೆ ಹುಡುಗಿಯ ಗತಿಯೇನು?" ಎಂದು ನಾವು ವಿಚಾರಿಸಿದೆವು. "ಓಃ, ಅದರಲ್ಲೇನು ಮಹಾ. ಹುಡುಗನೊಬ್ಬಾತ ಅವಳನ್ನು ನೋಡಿಕೊಳ್ಳುವನು!" ಎಂದು ಉದ್ಗರಿಸಿದರು ಪುರುಷಮಹಾಶಯರೊಬ್ಬರು. ನೋಡಿದಿರಾ, ಒಬ್ಬಾತನಂತೆ! ಯಾವಾಗಲೂ ಇದೆ ಮಾತು. ಈ 'ಒಬ್ಬಾತ' ಒಂದು ಪೀಡೆಯೆ ಸರಿ. ಅವಳಿಗಾಗಿ ಈ ಒಬ್ಬಾತ ಮೊದಲೆ ಮೀಸಲಾಗಿದ್ದಾನೆಂದು ನಾವೇಕೆ ತಿಳಿಯಬೇಕು? ಹೆಂಣೆಂದರೆ, ಗಂಡನ ಕೈಯಲ್ಲಿ ಒಪ್ಪಿಸಿಬಿಟ್ಟು ತಂದೆತಾಯಿಗಳು ಮುಕ್ತಿ ನಿಶ್ವಾಸ ಬಿಡುವ ವರೆಗೆ ತವರುಮನೆಯಲ್ಲಿ ಬಿದ್ದ ದೊಡ್ಡ ಮೂಟೆ" ಎಂದು ಮಾತನಾಡಿಕೊಳ್ಳುತ್ತಾರೆ ಈ ಜನ. ನೀವೂ ಒಬ್ಬ ಹುಡುಗೆಯಾಗಿದ್ದರೆ ಸಿಟ್ಟಿನ ಬೆಂಕಿಯಿಂದ ಪ್ರತಿಭಟಿಸುತಿದ್ದಿಲ್ಲವೆ?"

ಹೆಂಗುಸಿನ ಮೇಲಿನ ಗಂಡಸಿನ ಅತ್ಯಾಚಾರಗಳನ್ನು ಸಿಟ್ಟಿನ ಬೆಂಕಿಯಿಂದ ಪ್ರತಿಭಟಿಸಲು ನಾನು ಹುಡುಗೆಯಾಗಿಯೆ ಹುಟ್ಟಬೇಕೆಂದಿಲ್ಲ. ಅವನ ಅತ್ಯಾಚಾರಗಳಲ್ಲಿ ವಾರಸಾಹಕ್ಕಿನ ಕಾನೂನಿನ ಅನ್ಯಾಯ ಅತಿ ಸಾಮಾನ್ಯವಾದುದೆಂದು ನನ್ನ ಮತ. ಅದರಿಂದಾದ ಅನ್ಯಾಯಕ್ಕಿಂತ ಹೆಚ್ಚಿನ ಅನ್ಯಾಯವನ್ನು ತಡೆಯಲು ಶಾರದಾ ಬಿಲ್ಲು ಜನ್ಮವೆತ್ತಿದೆ. ಆದರೆ ಹೆಂಗುಸರ ಹಕ್ಕುಗಳ ವಿಷಯದಲ್ಲಿ ಕುಂದು ತರುವಂತಹ ಯಾವ ಒಪ್ಪಂದಕ್ಕೂ ನಾನು ಸಿದ್ಧನಿಲ್ಲ. ಹೆಂಣುಗಂಡೆಂಬ ಭೇದಭಾವವಿಲ್ಲದೆ ಎಲ್ಲ ಮಕ್ಕಳನ್ನೂ ಸಮದೃಷ್ಟಿ ಸಮಭಾವನೆಯಿಂದ ನಾವು ನೋಡಬೇಕು. ಸ್ತ್ರೀಯರು ದಿನೇ ದಿನೇ ಶಿಕ್ಷಣಪಡೆದು ತಮ್ಮ ಶಕ್ತಿ ಅರಿತುಕೊಂಡಂತೆ,

ತಮ್ಮನ್ನು ಮೆಟ್ಟಿ ಹೀನಸ್ಥಿತಿಗೆ ಇಳಿಸಿದ ಗಂಡಸರ ಅನ್ಯಾಯಗಳಿಗಾಗಿ ಅವರ ರೋಷ ಹೆಚ್ಚಾಗುವುದು ಖಂಡಿತ.

ಈ ಕಾಯದೆ ಕಟ್ಟಳೆಯಲ್ಲಿರುವ ಅನ್ಯಾಯವನ್ನಷ್ಟೆ ದೂರೀಕರಿಸುವುದು ತೋರಿಕೆಯ ಮೇಲುಪಚಾರ. ಅದರಿಂದ ಹೆಚ್ಚಿನ ಲಾಭವಿಲ್ಲ. ಏಕೆಂದರೆ ಈ ಅನ್ಯಾಯದ ಬೇರು ಜನ ತಿಳಿದುಕೊಂಡಿರುವುದಕ್ಕಿಂತ ಹೆಚ್ಚು ಆಳವಾಗಿ ಬೇರೂರಿದೆ. ಗಂಡಸರ ಅಧಿಕಾರಲೋಲುಪತೆ, ಕೀರ್ತಿಯ ಆಸೆ, ಹೆಚ್ಚಾಗಿ ಪರಸ್ಪರ ಕಾಮುಲಾಲಸೆ ಇವೇ ಈ ಅನ್ಯಾಯಕ್ಕೆ ಮೂಲ ಕಾರಣ. ಗಂಡಸಿಗೆ ಈ ಅಧಿಕಾರ ಸಂಪಾದಿಸಲು ಯಾವಾಗಲೂ ಆಸೆ. ಆಸ್ತಿಯ ಒಡೆತನದಿಂದಲೆ ಈ ಅಧಿಕಾರ ಪ್ರಾಪ್ತವಾಗುವುದು. ಒಡೆತನದಿಂದುಂಟಾದ ತನ್ನ ಪ್ರತಿಷ್ಠೆ ಪರಂಪರಾಗತವಾಗಿ ಸಾಗಬೇಕೆಂದು ಆತ ಹಲಬುವುದು ಸಹಜ. ಆದರೆ ಆಸ್ತಿ ಹರಿದು ಹಂಚಿಹಾಕಿದರೆ ಅರ್ಥಾತ್ ಎಲ್ಲ ಮಕ್ಕಳಿಗೂ ಸಮಪಾಲು ಕೊಟ್ಟರೆ ಇದು ಸಾಧ್ಯವಾಗಲಾರದು. ಹೀಗಾಗಿ ಹಿರಿಯ ಗಂಡುಸಂತತಿಗೆ ಆಸ್ತಿಯ ಹೆಚ್ಚಿನ ಪಾಲು ಪ್ರಾಪ್ತಿಯಾದುದು. ನಮ್ಮ ದೇಶದ ಹೆಂಗುಸರಲ್ಲಿ ಬಹ್ವಂಶ ಮದುವೆಯಾಗುವರು. ಅಂತಹರಿಗೆ ಕಾಯದೆ ದೃಷ್ಟಿಯಿಂದ ಯಾವ ಹಕ್ಕುಗಳಿಲ್ಲದಿದ್ದರೂ ಅವರು ಕೂಡ ತಮ್ಮ ಗಂಡಂದಿರ ಹಕ್ಕುಬಾಧ್ಯತೆಗಳಲ್ಲಿ ಸಮಪಾಲುಗೊಳ್ಳುತ್ತಾರೆ. ಕೆಲ ವಿಶಿಷ್ಟ ಶ್ರೀಮಂತರನ್ನು ಲಗ್ನವಾದ ಕಾರಣದಿಂದಲೆ ತಾವು ಹಾಗೆ ಹೀಗೆಯೆಂದು ಉಬ್ಬುಬ್ಬಿ ಮಾತನಾಡಿಕೊಳ್ಳುತ್ತಾರೆ. ಕಟ್ಟಳೆಗಳಲ್ಲಿ ಸುಧಾರಣೆಯಾಗಬೇಕೆಂಬ ವಿಷಯವಾಗಿ ಹೆಂಗಳೆಯರು ಚರ್ಚೆಯಲ್ಲಿ ತಮ್ಮ ಒಪ್ಪಿಗೆ (Vote) ಯಿತ್ತರೂ ಪ್ರಸಂಗಬಂದಲ್ಲಿ ತಮ್ಮ ಹಕ್ಕುಗಳನ್ನು ಬಿಟ್ಟುಕೊಡಲು ಸಿದ್ಧರಾಗುವುದಿಲ್ಲ.

ಸ್ತ್ರೀಯರಿಗೆ ಕಾಯಿದೆಯಲ್ಲಿದ್ದ ಸದ್ಯದ ಅಸಮಾನತೆಯನ್ನು ಕಿತ್ತೊಗೆಯಲು ನಾನು ಯಾವಾಗಲೂ ಪ್ರತಿಪಾದಿಸುತಿದ್ದೇನೆ. ಆದರೆ, ಇದಕ್ಕೆಲ್ಲ ಮೂಲಭೂತವಾಗಿರುವ ಕಾರಣವನ್ನೇ ಕಳೆದೊಗೆಯಲು ಭಾರತ ಮಹಿಳೆಯರು ಟೊಂಕ ಕಟ್ಟಬೇಕೆಂಬುದೆ ನನ್ನ ಇಚ್ಛೆ. ಸ್ತ್ರೀಯು ಸಹನೆಯ ಮೂರ್ತಿ, ತ್ಯಾಗಜೀವಿ. ಅವಳು ಸಾರ್ವಜನಿಕ ವೇದಿಕೆಯನ್ನು ಪ್ರವೇಶಿಸು

ವುದರಿಂದ ಜನಜೀವನ ಪವಿತ್ರವಾಗುವುದು. ಅಲ್ಲದೆ ಪುರುಷರ ಮಿತಿಗೆಟ್ಟ ಮಹತ್ವಾಕಾಂಕ್ಷೆ, ಆಸ್ತಿಸಂಗ್ರಹೇಚ್ಛೆ ಅಂಕೆಯೊಳಗಾಗುವವು. ತಮ್ಮ ಮಕ್ಕಳಿಗೆ ಆಸ್ತಿ ಹಂಚಿಕೊಡುವ ಭಾಗ್ಯ ನಮ್ಮಲ್ಲಿ ಲಕ್ಷಗಟ್ಟಲೆ ಜನರಿಗೆ ಇಲ್ಲವೆಂದು ಮೊದಲು ಅವರು ಅರಿಯಲಿ. ಪಿತ್ರಾರ್ಜಿತ ಆಸ್ತಿಯು ಇರದಿರು ವುದು ಕೆಲವರಿಗಾದರೂ ಒಳ್ಳೆಯದೆಂದು ನಾವು ಪಾಠ ಕಲಿಯುವಂತಾಗಲಿ. ತಂದೆತಾಯಿಗಳು ತಮ್ಮ ಮಕ್ಕಳಿಗಾಗಿ ಸರಿಸಮಾನವಾಗಿ ಬಿಟ್ಟುಕೊಡುವ ಚಿರವಾದ ಆಸ್ತಿಯೆಂದರೆ ತಮ್ಮ ಚಾರಿತ್ರ್ಯ ಮತ್ತು ವಿದ್ಯಾಭ್ಯಾಸದ ಸೌಕರ್ಯ. ಮಕ್ಕಳು ಸ್ವಾವಲಂಬಿಗಳಾಗುವಂತೆ, ಬೆವರುಸುರಿಸಿ ಪ್ರಾಮಾಣಿ ಕತೆಯಿಂದ ಹಣಗಳಿಸಿ ಧರ್ಮಜೀವನ ಸಾಗಿಸುವಂತೆ ಹೆತ್ತವರು ಮಕ್ಕಳನ್ನು ತರಬೇತು ಮಾಡಬೇಕು. ಅಲ್ಪವಯಿಗಳ ಭಾರವೇನೋ ಅವರ ಅಣ್ಣಂದಿರ ಮೇಲೆ ಸ್ವಾಭಾವಿಕವಾಗಿ ಬೀಳುವುದು. ಶ್ರೀಮಂತರು ತಮ್ಮ ಮಕ್ಕಳನ್ನು ಪಿತ್ರಾರ್ಜಿತ ಆಸ್ತಿಯ ಗುಲಾಮರನ್ನಾಗಿಸುವ ಬದಲು ಅವರಿಗೆ ಸ್ವಾವಲಂಬ ನದ ಶಿಕ್ಷಣವಿತ್ತರೆ ಅವರಲ್ಲಿದ್ದ ದೌರ್ಬಲ್ಯ ಮಾಯವಾಗುವುದು. ಇಲ್ಲದಿದ್ದರೆ ಸ್ವಾವಲಂಬನ ಶಕ್ತಿಯೆ ಕುಗ್ಗಿಹೋಗಿ ಸೋಮಾರಿತನದಲ್ಲಿ ಬೆಳೆದು ಕೇವಲ ವಿಷಯಾಸಕ್ತರಾಗಿ ಬಾಳುವರು. ಅನೇಕ ಶತಮಾನಗಳಿಂದ ಬಂದ ಅನಿಷ್ಟಗಳನ್ನು ಹೆಕ್ಕಿ ನಿರ್ಮೂಲಮಾಡುವುದೆ ಎಚ್ಚೆತ್ತ ಭಾರತ ಮಹಿಳೆ ಯರ ಮೊದಲನೆಯ ಕಾರ್ಯ.

ಪರಸ್ಪರರಲ್ಲಿಯ ವಿಷಯವಾಸನೆಯೂ ಹೆಂಗುಸರ ಇಂಥ ಹೀನ ಸ್ಥಿತಿಗೆ ಮುಖ್ಯಕಾರಣಗಳಲ್ಲೊಂದೆಂದು ಪ್ರಮಾಣಿಸಿ ಕೊಡಬೇಕಾಗಿಲ್ಲ. ಹೆಂಗುಸು ಬುದ್ಧಿಪೂರ್ವಕವಾಗಿಯಲ್ಲದಿದ್ದರೂ ಗಂಡನನ್ನು ಬಗೆ ಬಗೆಯಾಗಿ ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಅವನ ಸುತ್ತಲೂ ಒಂದು ಸೂಕ್ಷ್ಮ ಮಾಯಾಜಾಲ ಪಸರಿಸಿದಾಳೆ. ಅದೇರೀತಿಯಲ್ಲಿ ಗಂಡಸು ಅವಳ ಕೈ ಮೇಲಾಗಬಾರದೆಂದು ಅನೇಕ ವಿಘ್ನಗಳನ್ನೊಡ್ಡಿ ಪ್ರಯತ್ನಿಸುತ್ತಲಿದ್ದಾನೆ. ಹೀಗಾಗಿ ಇಬ್ಬರೂ ಅವನತಿಗೀಡಾಗಿದ್ದಾರೆ ಈ ಮಹತ್ವದ ಸಮಸ್ಯೆಗಳನ್ನೆ ಭರತಮಾತೆಯ ಇಂದಿನ ಸುಶಿಕ್ಷಿತ ಪುತ್ರಿಯರು ಕೈಗೊಳ್ಳಬೇಕಾಗಿದೆ. ಈ ಸಮಸ್ಯೆಗಳನ್ನು ಬಿಡಿಸಲು ಪಾಶ್ಚಿಮಾತ್ಯರ ರೀತಿಗಳನ್ನೇ ಅನುಕರಿಸು.

ವುದು ಅನುಚಿತ. ಅದು ಅವರ ವಾತಾವರಣಕ್ಕೆ ಸರಿಹೋದೀತಲ್ಲದೆ ನಮ್ಮ ವಾತಾವರಣಕ್ಕಲ್ಲ. ಆದುದರಿಂದ ನಮ್ಮ ಪರಿಸ್ಥಿತಿಗೆ ಒಗ್ಗುವ, ನಮ್ಮ ಜನಗಳ ಮನಕ್ಕೆ ಬಿಂಬಿಸುವ ಯೋಜನೆ ಸಿದ್ಧಪಡಿಸುವುದು ಅತ್ಯವಶ್ಯ. ನಮ್ಮಲ್ಲಿಯ ಹೀನ, ಅಸಹ್ಯ ಸಾಂಪ್ರದಾಯಗಳನ್ನು ತೊಡೆದು, ನಮ್ಮ ಸಂಸ್ಕೃತಿಯಲ್ಲಿಯ ಉದಾತ್ತವಾದವುಗಳನ್ನು, ಶ್ರೇಷ್ಠವಾದುವುಗಳನ್ನು ಹೆಕ್ಕಿಕೊಂಡು ನಮ್ಮನ್ನು ಬಲಿಷ್ಠರನ್ನಾಗಿ ಅಂತಃಶುದ್ಧಿಯುಳ್ಳವರನ್ನಾಗಿ, ಜಿತೇಂದ್ರಿಯರನ್ನಾಗಿ ಮಾಡುವಂತಹ ಯೋಜನೆ ಕೈಗೊಳ್ಳಬೇಕು. ಈ ಕಾರ್ಯಗಳು ಭರತಭೂಮಿಯ ಸೀತೆ, ದ್ರೌಪದಿ, ಸಾವಿತ್ರಿ, ದಮಯಂತಿಯರಿಂದಾಗಬಲ್ಲುದಲ್ಲದೆ ಗಂಡುಬೀರಿ ಅಥವಾ ಒಜ್ಜಾವತಿಯರಿಂದಲ್ಲ. ]

ಯಂಗ್ ಇಂಡಿಯಾ, ೧೭-೧೦-೧೯೨೯

# ಸ್ತ್ರೀಜನೋದ್ಧರಣ

[ ಹೆಂಣು ಗಂಡಿನ ಒಡನಾಡಿ, ಬುದ್ಧಿಮತ್ತೆಯಲ್ಲಿ ಅವಳು ಗಂಡಸಿಗೆ ಯಾವ ರೀತಿಯಿಂದಲೂ ಕಡಮೆಯಿಲ್ಲ. ಗಂಡನ ಚಿಕ್ಕ ಪುಟ್ಟ ಕಾರ್ಯಗಳಲ್ಲಿಯೂ ಭಾಗ ವಹಿಸಲು ಅವಳಿಗೆ ಹಕ್ಕಿದೆ; ಅವನಿಗಿದ್ದಷ್ಟೆ ಸ್ವಾತಂತ್ರ್ಯಸಮಾನತೆ ಅವಳಿಗೂ ಇವೆ. ]

ಮುರಾರ್ಜಿ ಗೋಕುಲದಾಸ ಭವನದಲ್ಲಿ ಮುಂಬಯಿ ಭಗಿನಿ ಸಮಾಜದ ವಾರ್ಷಿಕೋತ್ಸವ ಸಮಾರಂಭದ ಸಮಯ ಗಾಂಧೀಜಿಯವರು ಇಂತು ಭಾಷಣ ಕೊಡಿಸಿದರು:—

'ಸ್ತ್ರೀ ಜನೋದ್ಧರಣ'ದ ವಿಷಯವಾಗಿ ಮಾತನಾಡುವ ಮೊದಲು ನಾವು ಈ 'ಉದ್ಧರಣ' ಶಬ್ದದ ಅರ್ಥಮಾಡಿಕೊಳ್ಳುವುದು ಅಗತ್ಯ. 'ಸ್ತ್ರೀಯರ ಉದ್ಧರಣ'ವೆಂದು ನಾವು ಹೇಳುವಾಗ ಸ್ತ್ರೀಯರು ಈ ಮೊದಲು ನಿಮ್ನಸ್ಥಿತಿಗೆ ಇಳಿದಿದಾರೆಂದು ಅರ್ಥವಾಗುತ್ತದೆ. ಹಾಗಾದರೆ ಈ ಅವನತಿಯ ಮೂಲಕಾರಣವೇನು, ಯಾವರೀತಿಯಾಗಿ ಆಯಿತೆಂದು

ವಿಚಾರಿಸುವುದೂ ಆವಶ್ಯಕ. ಈ ವಿಷಯವಾಗಿ ನಾವು ಸ್ವಲ್ಪ ಗಂಭೀರವಾಗಿ ವಿಚಾರಮಾಡುವುದೂ ನಮ್ಮ ಆದ್ಯ ಕರ್ತವ್ಯ. ನಾನು ಭರತಭೂಮಿಯ ತುಂಬ ಅಲೆದಾಡಿದಾಗ ಈ ಚಳುವಳಿ ಕೇವಲ ಕೆಲ ಜನರಿಗೆ ಮಾತ್ರ ಸಂಬಂಧಿಸಿದುದೆಂದು ನನಗೆ ಕಂಡುಬಂದಿದೆ. ಈ ವಿಶಾಲವಾದ ಜನಸಮುದಾಯದಲ್ಲಿ ಈ ಗುಂಪು ಒಂದು ಕಣ ಮಾತ್ರ. ಕೋಟ್ಯವಧಿ ಸ್ತ್ರೀ-ಪುರುಷರಿಗೆ ಈ ಚಳುವಳಿಯ ಗಂಧಗಾಳಿ ಕೂಡ ಸೋಂಕಿಲ್ಲ. ನೂರಕ್ಕೆ ೮೫ ರಷ್ಟು ಜನ ತಮ್ಮ ಸುತ್ತಲಿನ ಪರಿಸ್ಥಿತಿಯ ಅರಿವಿಲ್ಲದೆ ತಮ್ಮ ಜೀವನ ನೌಕೆ ತಳ್ಳುತಿದ್ದಾರೆ. ಈ ಸ್ತ್ರೀ-ಪುರುಷರು ಅಜ್ಞಾನಿಗಳಿದ್ದರೂ ತಮ್ಮ ಜೀವನದ ನಿತ್ಯಕರ್ಮಗಳನ್ನಿಷ್ಟು ಸಮರ್ಪಕವಾಗಿ ಮಾಡುತಿದ್ದಾರೆ. ಇವರಿಬ್ಬರಿಗೂ ಅಷ್ಟೆ ಶಿಕ್ಷಣ ದೊರೆತಿದೆ ಅಥವಾ ಶಿಕ್ಷಣದಿಂದ ಇಬ್ಬರೂ ಅಷ್ಟೆ ದೂರವಾಗಿದಾರೆಂದೂ ಎನ್ನಬಹುದು ಆದರೂ ಅವರು ಅನ್ಯೋನ್ಯರಾಗಿದಾರೆ. ಅವರ ಜೀವನದಲ್ಲಿ ಏನಾದರೂ ಅಪೂರ್ಣತೆ ಕಂಡುಬಂದರೆ, ಅದರ ಮೂಲಕಾರಣ ಈ ಉಳಿದ ೧೫ ಜನರ ಅಪೂರ್ಣ ಜೀವನದಲ್ಲಿ ಕಾಣಬಹುದು. ಭರತಭೂಮಿಯ ಪ್ರತಿ ನೂರರಲ್ಲಿಯ ಈ ೮೫ ಜನರ ವಿಷಯವಾಗಿ ನಮ್ಮ ಭಗಿನಿಯರು ಕೂಲಂಕಷವಾಗಿ ಅಭ್ಯಾಸಮಾಡಿದಲ್ಲಿ ಜನಸೇವೆ ಮಾಡುವ ಒಳ್ಳೆಯ ಕಾರ್ಯಕ್ರಮದ ಪಟ್ಟಿ ಸಿದ್ಧಪಡಿಸಲು ಈ ಸಮಾಜದವರಿಗೆ ಸಾಕಷ್ಟು ಸಾಮುಗ್ರಿ ದೊರೆಯುವುದೆಂದು ನಾ ಹೇಳಬಲ್ಲೆ.

ಈಗ ನಾನು ಭಾಷಣ ಮಾಡುವುದು ಈ ಉಳಿದ ೧೫ ಜನರ ವಿಷಯವನ್ನು ಕುರಿತು ಹೀಗಿದ್ದೂ ಗಂಡು-ಹೆಣ್ಣು ಇಬ್ಬರಲ್ಲಿಯೂ ಸಾಮಾನ್ಯವಾಗಿರುವ ದೋಷಗಳನ್ನು ಕುರಿತು ಚರ್ಚಿಸುವುದು ಪ್ರಕೃತಕ್ಕೆ ಅಪ್ರಸಂಗ. ಈಗ ನಾನು ಮಾತನಾಡುವುದು 'ಗಂಡಸಿನ ಮಟ್ಟದಿಂದ ಸ್ತ್ರೀಯರ ಸುಧಾರಣೆ'ಯ ವಿಷಯವಾಗಿ. ಕಾಯಿದೆಕಟ್ಟಳೆ ಮಾಡುವುದರಲ್ಲಿ ಹೆಚ್ಚಿನ ಅಧಿಕಾರ ಗಂಡಸಿನ ಕೈಯಲ್ಲಿದೆ, ಮತ್ತು ಈ ಸ್ವಯಂ ನಿಯೋಜಿತ ಕಾರ್ಯ ಮಾಡುವಾಗ್ಗೆ ಅವನಿಂದ ಯಾವಾಗಲೂ ಸಮಂಜಸವಾಗಿ ನ್ಯಾಯಬುದ್ಧಿಯಿಂದ ನಡೆದುಕೊಳ್ಳಲು ಸಾಧ್ಯವಿಲ್ಲ. 'ಸ್ತ್ರೀಯರ ಸ್ವಾಭಾವಿಕ ಗುಣಗಳಿವು' ಎಂದು ಶಾಸ್ತ್ರಗಳು ಕೆಲವೊಂದು ಕಲಂಕಗಳನ್ನು ಸ್ತ್ರೀಯರ ಮೇಲೆ ಹೇರಿವೆ. ಅವುಗಳನ್ನು ತೊಡೆದುಹಾಕಲು ಸುಧಾರಕರು ತಮ್ಮ ಪ್ರಯತ್ನದ ಬಹುಭಾಗ ಮೀಸಲಿಡಬೇಕು. ಆದರೆ ಇದನ್ನು ಮಾಡುವವರಾರು? ಹೇಗೆ

ಮಾಡಬೇಕು? ಆ ಬಗ್ಗೆ ನಾವು ಸೀತೆ, ದಮಯಂತಿ, ದ್ರೌಪದಿಯಂತಹ ನಿರ್ಮಲ ಭಾವನೆಯ ಕೆಚ್ಚೆದೆಯ, ಆತ್ಮಸಂಯಮವುಳ್ಳ ಸ್ತ್ರೀಯರನ್ನು ನಿರ್ಮಿಸಬೇಕು. ಹಾಗೆ ಮಾಡಬಲ್ಲೆವಾದರೆ ಹಿಂದೂ ಸಮಾಜವು ಸೀತೆ, ದಮಯಂತಿಯರಿಗೆ ಸಲ್ಲಿಸುವ ಮನ್ನಣೆಯನ್ನು ಈ ಸ್ತ್ರೀಯರಿಗೂ ಸಲ್ಲಿಸುವುದು. ಬಳಿಕ ಇವರ ನುಡಿಗಳೂ ಶಾಸ್ತ್ರದಷ್ಟೆ ಆಧಾರವಾಗುವವು. ಮತ್ತು ಸ್ತ್ರೀಯರ ವಿಷಯವಾಗಿ ಸ್ಮೃತಿಗಳಲ್ಲಿ ಅಲ್ಲಲ್ಲಿ ತಲೆದೋರುವ ಕುತ್ಸಿತ ಭಾವನೆಗಳ ಬಗ್ಗೆ ಜುಗುಪ್ಸೆಯುಂಟಾಗಿ ಅವುಗಳನ್ನು ಬೇಗನೆ ಮರೆತುಬಿಡುವೆವು. ಹಿಂದೆ ನಮ್ಮ ಹಿಂದೂ ಧರ್ಮದಲ್ಲಿ ಇಂತಹ ವಿಪ್ಲವಗಳಾಗಿವೆ, ಮುಂದೂ ಆಗಲಿವೆ. ಮತ್ತು ಇದರಿಂದ ನಮ್ಮ ಧರ್ಮ ಸ್ಥಿರಗೊಂಡು ಧರ್ಮದ ಬಗ್ಗೆ ಆಗಾಗ ತಲೆದೋರುವ ಅವಿಶ್ವಾಸ ನಷ್ಟವಾಗಿ ಹೋಗುವುದು. ಈ ಸಂಘ ಸೀತೆ, ದಮಯಂತಿಯರಂತಹ ಉದಾತ್ತ ಜೀವಿಗಳನ್ನು ಬೇಗನೆ ನಿರ್ಮಿಸುವಂತಾಗಲೆಂದು ನಾನು ಪರಮಾತ್ಮನಲ್ಲಿ ಪ್ರಾರ್ಥಿಸುವೆ.

ನಾವು ಈಗ ನಮ್ಮ ಸ್ತ್ರೀಯರ ಪತನದ ಮೂಲಕಾರಣವನ್ನು ಚರ್ಚಿಸಿದೆವು. ಅಲ್ಲದೆ ಯಾವ ಆದರ್ಶಗಳಿಂದ ನಮ್ಮ ಸ್ತ್ರೀಯರ ಸದ್ಯದ ದುಃಸ್ಥಿತಿ ಸುಧಾರಿಸಲು ಶಕ್ಯವಾಗಬಲ್ಲುದೊ ಅವುಗಳ ವಿಷಯವಾಗಿಯೂ ಚರ್ಚಿಸಿದೆವು. ಇಂತಹ ಆದರ್ಶವನ್ನು ಸಾಧಿಸಬಲ್ಲ ಸ್ತ್ರೀಯರ ಸಂಖ್ಯೆ ತೀರ ಕಡಮೆ ಇರುವುದು ಸಹಜ. ಆದರೆ ಪ್ರಯತ್ನಪಟ್ಟಲ್ಲಿ ಸಾಮಾನ್ಯ ಸ್ತ್ರೀಯೂ ಎಂಥ ಕಾರ್ಯ ಮಾಡಬಲ್ಲಳೆಂಬುದರ ವಿಷಯವಾಗಿ ತುಸು ವಿಚಾರಿಸೋಣ: ಸಾಧ್ಯವಾದಷ್ಟು ಹೆಂಗುಸರಲ್ಲಿ ತಮ್ಮ ಸದ್ಯದ ಸ್ಥಿತಿಯಬಗ್ಗೆ ತಕ್ಕ ಅರಿವನ್ನುಂಟುಮಾಡುವ ಕಾರ್ಯವನ್ನು ಅವರು ಮೊದಲಿಸಬೇಕಾಗಿದೆ. ಕೇವಲ ಅಕ್ಷರಾಭ್ಯಾಸದಿಂದಲೆ ಇದು ಸಾಧ್ಯವೆಂದು ನಂಬಿಕೊಂಡಿರುವ ಗುಂಪಿಗೆ ನಾನು ಸೇರಿದವನಲ್ಲ. ಅಕ್ಷರಾಭ್ಯಾಸದ ತಳಹದಿಯ ಮೇಲೆ ಕಾರ್ಯ ಮಾಡುವುದೆಂದರೆ ನಮ್ಮ ಗುರಿ, ಆದರ್ಶಸಾಧನೆಯನ್ನು ಅನಿಶ್ಚಿತಕಾಲದವರೆಗೆ ತಡೆ ಹಿಡಿದಂತೆಯೆ ಸರಿ. ಅಲ್ಲಿಯವರೆಗೆ ನಾವು ತಡೆಯುವ ಅವಶ್ಯಕತೆಯಿಲ್ಲವೆಂದು ನನಗೆ ಹೆಜ್ಜೆ ಹೆಜ್ಜೆಗೂ ಅನುಭವವಾಗುತಿದೆ. ಹೆಂಗುಸರಿಗೆ ಅಕ್ಷರಶಿಕ್ಷಣ ಕೊಡದೆಯೂ ಅವರ ಸದ್ಯದ ದುಸ್ಥಿತಿಯಬಗ್ಗೆ ಸರಿಯಾಗಿ ಮನಗಾಣಿಸಿ ಕೊಡಬಲ್ಲೆವು. ಹೆಂಣು ಗಂಡಿನ ಒಡನಾಡಿ. ಬುದ್ಧಿಮತ್ತೆ

ಯಲ್ಲಿ ಅವಳು ಗಂಡಸಿಗೆ ಯಾವರೀತಿಯಿಂದಲೂ ಕಡಮೆಯಿಲ್ಲ. ಗಂಡಸಿನ ಚಿಕ್ಕ ಪುಟ್ಟ ಕಾರ್ಯಗಳಲ್ಲಿಯೂ ಭಾಗವಹಿಸಲು ಅವಳಿಗೆ ಹಕ್ಕಿದೆ; ಅವನಿಗಿದ್ದಷ್ಟೆ ಸ್ವಾತಂತ್ರ್ಯ, ಸಮಾನತೆ ಅವಳಿಗೂ ಇವೆ ಗಂಡಸಿಗೆ ತನ್ನ ಕಾರ್ಯಕ್ಷೇತ್ರದಲ್ಲಿ ಹೇಗೆ ವಿಶಿಷ್ಟಸ್ಥಾನವಿದೆಯೊ ಹಾಗೆಯೆ ಅವಳಿಗೂ ತನ್ನ ಕಾರ್ಯರಂಗದಲ್ಲಿ ವಿಶಿಷ್ಟಸ್ಥಾನವಿದೆ. ಇದು ಸರ್ವಸಾಮಾನ್ಯವಾಗಿ ತಿಳಿದು ಕೊಳ್ಳುವಂತಹ ವಿಚಾರ. ಇದನ್ನು ನಾವು ಓದು-ಬರೆಹದಿಂದ ಕಲಿತುಕೊಳ್ಳ ಬೇಕಿಲ್ಲ. ದುಷ್ಟರೂಢಿಯು ಬಲದಿಂದ ತೀರ ಅಜ್ಞಾನಿ, ಅವಿವೇಕಿ ಗಂಡನೂ ತನಗೆ ಯೋಗ್ಯತೆಯಿಲ್ಲದಿದ್ದರೂ ಹೆಂಗುಸಿನಮೇಲೆ ಹೆಚ್ಚುಗಾರಿಕೆ ಪಡೆದಿದ್ದಾನೆ; ಒಂದುವೇಳೆ ಅವನಿಗೆ ಯೋಗ್ಯತೆಯಿದ್ದರೂ, ಈ ಹೆಚ್ಚುಗಾರಿಕೆ ಇರಕೂಡದು. ನಮ್ಮ ಸ್ತ್ರೀಯರ ಶೋಚನೀಯ ಸ್ಥಿತಿಯ ಮೂಲಕವೆ ನಮ್ಮ ಎಷ್ಟೋ ಸುಧಾರಣೆಗಳು ಅರ್ಧಕ್ಕೆ ಮುಗುಚಿಕೊಂಡಿವೆ ಆದರಿಂದಲೆ ನಮ್ಮ ಕಾರ್ಯಕ್ಕೆ ತಕ್ಕ ಫಲ ಸಿಗದಂತಾಗಿದೆ. 'ಆನೆ ಕಳೆದುಕೊಂಡು ಬಾಲಕ್ಕೆ ಬಡಿದಾಡಿದ ಜಾಣ'ನಂತೆ ಉದ್ಯಮದಲ್ಲಿ ತಕ್ಕಷ್ಟು ಹಣ ತೊಡಗಿಸದೆ ಚಿಕ್ಕ ಪುಟ್ಟ ವ್ಯವಹಾರಗಳ ಚಿಲ್ಲರೆ ಲಾಭಕ್ಕಾಗಿ ತಲೆಗೆಡಿಸಿಕೊಳ್ಳುವ ಚಿಕ್ಕ ತಕ್ಕಡಿ ಅಂಗಡಿಕಾರನ ಸ್ಥಿತಿಯಾಗಿದೆ ನಮ್ಮದು.

ಓದು-ಬರೆಹವಿಲ್ಲದೆ ಅನೇಕ ಹಿತಕರ ಉಪಯುಕ್ತ ಕಾರ್ಯ ಮಾಡಲು ಸಾಧ್ಯವೆಂಬುದೇನೊ ನಿಜ. ಆದರೆ ಓದು-ಬರೆಹದ ಜ್ಞಾನವಿಲ್ಲದೆ ನಮ್ಮ ಜೀವನ ಸುಖಮಯವಾಗುವುದಿಲ್ಲವೆಂದೂ ನನ್ನ ದೃಢ ನಂಬಿಗೆ. ಶಿಕ್ಷಣದಿಂದ ನಮ್ಮ ಬುದ್ಧಿ ಮತ್ತೆ ವರ್ಧಿಸುತ್ತದೆ ಹಾಗೂ ತೀಕ್ಷ್ಣಗೊಳ್ಳುತ್ತದೆ. ಮೇಲಾಗಿ ಸತ್ಕಾರ್ಯಮಾಡಲು ನಮ್ಮ ಶಕ್ತಿಗೆ ಹೊಸ ಬಲವುಂಟಾಗುತ್ತದೆ. ಅಕ್ಷರ ಶಿಕ್ಷಣಕ್ಕೆ ಅನವಶ್ಯಕವಾಗಿ ಅಗ್ರಸ್ಥಾನವನ್ನೆಂದಿಗೂ ನಾನು ಕೊಟ್ಟಿಲ್ಲ. ಅದಕ್ಕೆ ತಕ್ಕುದಾದ ಸ್ಥಾನವನ್ನು ಕೊಡಲು ಬಯಸುತ್ತಿದ್ದೇನೆ. ಸ್ತ್ರೀಯರು ಅಶಿಕ್ಷಿತರೆಂಬ ಕಾರಣದಿಂದ ಅವರ ಹಕ್ಕುಬಾಧ್ಯತೆಗಳನ್ನು ಕಸಿದುಕೊಳ್ಳುವುದಕ್ಕಾಗಲಿ ಇಲ್ಲವೆ ತಡೆಹಿಡಿಯುವುದಕ್ಕಾಗಲಿ ಗಂಡಸಿಗೆ ನ್ಯಾಯವಾದ ಯಾವ ಅಧಿಕಾರವಿಲ್ಲವೆಂದು ನಾನು ಆಗಾಗ ಸಾರುತ್ತ ಬಂದಿದ್ದೇನೆ. ತಮ್ಮ ಹಕ್ಕು ಪ್ರತಿಪಾದಿಸಲು, ಆ ಬಗ್ಗೆ ಪ್ರಚಾರ ಕೈಗೊಳ್ಳಲು ಸ್ತ್ರೀಯರಿಗೆ ಶಿಕ್ಷಣ ಆವಶ್ಯಕ. ಶಿಕ್ಷಣವಿಲ್ಲದಿದ್ದರೆ ಆತ್ಮಜ್ಞಾನ ಪಡೆವುದೂ ಅಸಾಧ್ಯ. ಅಲ್ಲದೆ ಉತ್ಕೃಷ್ಟ ವಿಷಯ

ಗಳನ್ನೊಳಗೊಂಡ ಅನೇಕ ಹೊತ್ತಿಗೆಗಳಿಂದುಂಟಾಗುವ ಆನಂದಕ್ಕೆ ಓದು ಬಾರದವನು ಎರವಾಗುವನು. ಶಿಕ್ಷಣವಿಲ್ಲದ ಮನುಷ್ಯ ಪಶು ಸಮಾನ ವೆಂದರೆ ಅತಿಶಯೋಕ್ತಿಯಲ್ಲ. ಆದುದರಿಂದ ಪುರುಷನಿಗೆ ಶಿಕ್ಷಣ ಹೇಗೆ ಅವಶ್ಯವೊ ಹಾಗೆಯೇ ಸ್ತ್ರೀಯರಿಗೂ ಶಿಕ್ಷಣ ಅವಶ್ಯ. ಎಂದರೆ ಇಬ್ಬರಿಗೂ ಒಂದೇ ಶಿಕ್ಷಣಕ್ರಮವಿರಬೇಕೆಂದಲ್ಲ. ಮೊದಲನೆಯದಾಗಿ ನಮ್ಮ ಆಧುನಿಕ ಶಿಕ್ಷಣಕ್ರಮದಲ್ಲಿ ಅನೇಕ ದೋಷಗಳಿವೆ. ಅದರಿಂದ ನಮಗೆ ಅನೇಕ ರೀತಿ ಯಲ್ಲಿ ಹಾನಿಯೂ ಆಗಿದೆ. ಗಂಡು-ಹೆಂಣು ಇಬ್ಬರೂ ಈ ಶಿಕ್ಷಣವನ್ನು ನುಂಗಲೇಬೇಕು, ಜೀರ್ಣಿಸಲೇಬೇಕು. ಈ ಶಿಕ್ಷಣಪದ್ಧತಿ ಒಂದುವೇಳೆ ದೋಷರಹಿತವಾಗಿದ್ದರೂ ಈ ಪದ್ಧತಿ ನಮ್ಮ ಸ್ತ್ರೀಯರಿಗೆ ಯೋಗ್ಯ ಶಿಕ್ಷಣ ಕ್ರಮವಾಗುತಿತ್ತೆಂದು ನಾನೆಂದಿಗೂ ಹೇಳಲಾರೆ. ಗಂಡು-ಹೆಂಣು ಇಬ್ಬರೂ ಸರಿಸಮಾನರು. ಆದರೂ ಅವರು ಒಂದೇ ಹುಟ್ಟಿದವರಲ್ಲ. ಅವರಿಬ್ಬರೂ ಅಪ್ರತಿಮ ಜೊತೆ, ಪರಸ್ಪರ ಪೂರಕರು ; ಪರಸ್ಪರ ಸಹಾಯಕರು. ಅವರಲ್ಲಿ ಒಬ್ಬರು ಹೊರತಾದರೆ ಮತ್ತೊಬ್ಬರ ಸ್ಥಾನದ ಕಲ್ಪನೆಯೂ ಅಭದ್ರ ವಾಗುವುದು. ಈ ಘಟನೆಗಳನ್ನು ಅವಲೋಕಿಸಲಾಗಿ ಇವರಲ್ಲಿ ಒಬ್ಬರ ಸ್ಥಾನಕ್ಕೆ ಚ್ಯುತಿಬಂದರೆ ಇಬ್ಬರೂ ನಿಶ್ಶೇಷರಾಗುವರೆಂಬ ಉಪಸಿದ್ಧಾಂತ ಹೊರಡಬಹುದು. ಆದುದರಿಂದ ಸ್ತ್ರೀ ಶಿಕ್ಷಣ ಕ್ರಮವನ್ನು ಸಿದ್ಧಪಡಿಸುವಾಗ ಈ ಪ್ರಧಾನ ಸತ್ಯಾಂಶವನ್ನು ನಾವೆಂದಿಗೂ ಮರೆಯಲಾಗದು. ದಂಪತಿ ಗಳಲ್ಲಿ ಗಂಡಸು ಹೊರಗಿನ ಕೆಲಸಗಳಲ್ಲಿ ಪ್ರಮುಖ ಭಾಗವಹಿಸಬೇಕಾದುದ ರಿಂದ ಅವುಗಳ ಬಗ್ಗೆ ಅವನಿಗೆ ಹೆಚ್ಚಿನ ಜ್ಞಾನವಿರುವುದು ಸಹಜ ಮತ್ತು ಗೃಹಜೀವನವೇ ಸ್ತ್ರೀಯ ಪ್ರಧಾನ ಕಾರ್ಯಕ್ಷೇತ್ರವಾದುದರಿಂದ ಮನೆಗೆಲಸ, ಮಕ್ಕಳ ಆರೈಕೆ, ಮಕ್ಕಳ ಶಿಕ್ಷಣಗಳ ವಿಷಯವಾಗಿ ಅವಳಿಗೆ ಗಂಡಸಿಗಿಂತ ಅಧಿಕ ಜ್ಞಾನವಿರುವುದು ಸ್ವಭಾವಿಕ. ಎಂದರೆ ಗಂಡು-ಹೆಂಣು ಪರಸ್ಪರರ ಕಾರ್ಯಗಳ ಬಗ್ಗೆ ಸಾಮಾನ್ಯ ಜ್ಞಾನ ಪಡೆಯಬಾರದೆಂದಾಗಲಿ ಅಥವಾ ತಮಗೆ ಮೀಸಲಾಗಿಟ್ಟ ಕ್ಷೇತ್ರದ ಹೊರತು ಅನ್ಯ ವಿಷಯಜ್ಞಾನ ಮಾಡಿ ಕೊಳ್ಳಬಾರದೆಂದಾಗಲಿ ಅರ್ಥವಲ್ಲ ಆದರೆ ಶಿಕ್ಷಣದ ಈ ಮೂಲ ತತ್ತ್ವ ವನ್ನು ಅಡಿಪಾಯವಾಗಿಟ್ಟುಕೊಳ್ಳದೆ ಶಿಕ್ಷಣಕ್ರಮ ಸಿದ್ಧಪಡಿಸಿದರೆ ಮಾನವನ ಪೂರ್ಣ ಜೀವನವು ವಿಕಾಸಗೊಳ್ಳಲಾರದು.

ಸ್ತ್ರೀಯರಿಗೆ ಇಂಗ್ಲಿಷ್ ಶಿಕ್ಷಣ ಅವಶ್ಯವೊ ಅನವಶ್ಯವೊ ಎಂಬ ವಿಷಯವಾಗಿ ಒಂದೆರಡು ಮಾತಗಳನ್ನಾಡುವೆ. ಗಂಡಸಿಗಾಗಲಿ, ಹೆಂಗುಸಿಗಾಗಲಿ ಸರ್ವಸಾಮಾನ್ಯವಾಗಿ ಇಂಗ್ಲಿಷಿನ ಜ್ಞಾನ ಅನವಶ್ಯಕವೆಂಬ ನಿಶ್ಚಿತ ಅಭಿಪ್ರಾಯಕ್ಕೆ ಬಂದಿದೇನೆ. ನಮ್ಮ ಜೀವನ ನಿರ್ವಹಣಕ್ಕಾಗಿ, ನಮ್ಮ ರಾಜಕೀಯ ವಿಚಾರವಿನಿಮಯಕ್ಕಾಗಿ ಇಂಗ್ಲಿಷು ಅಗತ್ಯವೆಂಬುದು ನಿಜ. ಹೆಂಣು ಹೊಟ್ಟೆಗಾಗಿ ದುಡಿವುದಾಗಲಿ, ಉದ್ಯೋಗ ಕ್ಷೇತ್ರದ ಸಾಹಸಗಳಲ್ಲಿ ಕೈಹಾಕುವುದಾಗಲಿ ನನಗೆ ಸಮ್ಮತವಿಲ್ಲ. ಇಂಗ್ಲಿಷ್ ಶಿಕ್ಷಣ ಬೇಕೆನ್ನುವ, ಕಲಿಯಲಿಚ್ಛಿಸುವ, ಕೆಲ ಹೆಂಣುಮಕ್ಕಳು ಗಂಡುಮಕ್ಕಳ ಸಾಲೆ ಸೇರಿ ತಮ್ಮಿಚ್ಛೆ ಪೂರೈಸಿಕೊಳ್ಳಬಹುದು. ಹೆಂಣುಮಕ್ಕಳ ಸಾಲೆಯಲ್ಲಿಯೂ ಇಂಗ್ಲಿಷ್ ಶಿಕ್ಷಣಕ್ರಮ ಜೋಡಿಸುವುದೆಂದರೆ ನಮ್ಮ ದುರ್ಬಲತೆಯನ್ನು ಹೆಚ್ಚಿಸಿಕೊಂಡಂತೆಯೆ ಸರಿ. ಗಂಡು-ಹೆಂಣೆಂಬ ತಾರತಮ್ಯ ಭಾವವಿಲ್ಲದೆ ಎಲ್ಲರಿಗೂ ಇಂಗ್ಲಿಷ್ ಸಾಹಿತ್ಯದ ಅಮೌಲ್ಯ ಭಾಂಡಾರವನ್ನು ತೆರೆದಿಡಬೇಕೆಂಬುದಾಗಿ ಕೆಲಜನ ಆಡುವುದನ್ನು ನಾನು ಬಲ್ಲೆ. ಈ ದೃಷ್ಟಿಯುಳ್ಳವರು ಆವುದೋ ತಪ್ಪುತಿಳಿವಳಿಕೆಯಿಂದ ಹೊರಟಿದ್ದಾರೆಂದು ನನ್ನ ನಮ್ರ ಮತ. ಗಂಡಸರಿಗಾಗಿ ತೆರೆದಿಟ್ಟ ಈ ಭಂಡಾರದ ಬಾಗಿಲನ್ನು ಹೆಂಣುಮಕ್ಕಳು ಬಂದರೆ ಮುಚ್ಚಬೇಕೆಂದು ಯಾರೂ ಅನ್ನಲಾರರು. ಸಾಹಿತ್ಯವನ್ನು ಅಭ್ಯಸಿಸುವ ಪ್ರಬಲ ಅಭಿರುಚಿ ನಿಮ್ಮಲ್ಲಿದ್ದರೆ ಜಗತ್ತಿನ ಎಲ್ಲ ಭಾಷೆಗಳ ಸಾಹಿತ್ಯವನ್ನಭ್ಯಸಿಸುವ ನಿಮ್ಮ ದೃಢನಿರ್ಧಾರವನ್ನು ಯಾರು ತಡೆಯಬಲ್ಲರು? ಆದರೆ ಒಂದು ಸಮಾಜದ ಆವಶ್ಯಕತೆಯನ್ನುಪಲಕ್ಷಿಸಿ ಶಿಕ್ಷಣಕ್ರಮ ಸಿದ್ಧಪಡಿಸಿರುವಾಗ ಸಾಹಿತ್ಯಾಭಿರುಚಿ ಪಡೆದ ಹಲವೆ ಜನರ ಕೊರತೆಗಳನ್ನು ಪೂರ್ತಿಗೊಳಿಸಲು ಸಾಧ್ಯವಾಗಲಾರದು. ಇಂಗ್ಲಿಷು ಅಭ್ಯಾಸಕ್ಕೆ ಕಡಮೆವೇಳೆ ಮೀಸಲಾಗಿಡಿರೆಂದು ನಾನು ಬೋಧಿಸುವದು. ಇಂಗ್ಲಿಷು ಸಾಹಿತ್ಯಾಭ್ಯಾಸದಿಂದ ಪಡೆವ ಮನದಾನಂದಕ್ಕೆ ಅಡೆ-ತಡೆಯನ್ನುಂಟುಮಾಡುವ ಉದ್ದೇಶದಿಂದಲ್ಲ. ಆದರೆ ಸ್ವಾಭಾವಿಕ ಮಾರ್ಗ ಅನುಸರಿಸಿದಲ್ಲಿ ಕಡಮೆ ವೆಚ್ಚದಲ್ಲಿ ಹೆಚ್ಚು ಪರಿಶ್ರಮವಿಲ್ಲದೆ ಅಷ್ಟೆ ಆನಂದ ಪಡೆಯಬಹುದೆಂಬುದೆ ನನ್ನ ಮತ. ಜಗತ್ತಿನಲ್ಲಿ ಎಷ್ಟೋ ಅಮೌಲ್ಯವಾದ ಸುಂದರ ಕೃತಿ ರತ್ನಗಳಿವೆ. ಆದರೆ ಅವೆಲ್ಲವೂ ಇಂಗ್ಲಿಷ್ ವಾತಾವರಣವುಳ್ಳವುಗಳೇ ಅಲ್ಲ. ತಮಲ್ಲಿಯೂ ಅಮೌಲ್ಯ ಭಾಂಡಾರವಿದೆಯೆಂದು ಅನ್ಯ ಭಾಷೆಗಳೂ

ಅಭಿಮಾನದಿಂದ ಎದೆತಟ್ಟಿ ಹೇಳಬಲ್ಲವು. ಈ ಎಲ್ಲ ಅಮೌಲ್ಯ ಕೃತಿ ರತ್ನಗಳನ್ನು ನಮ್ಮ ಜನಸಾಮಾನ್ಯಕ್ಕೆ ಒದಗಿಸಿ ಕೊಡಬೇಕಾಗಿದೆ. ಸುಶಿಕ್ಷಿತರು ಅವುಗಳನ್ನು ನಮ್ಮ ಭಾಷೆಗೆ ಅನುವಾದಿಸುವುದರಿಂದಲೆ ಈ ಕಾರ್ಯ ಸಾಧ್ಯವು.

ಮೇಲೆ ವಿವರಿಸಿದ ಶಿಕ್ಷಣಕ್ರಮವೊಂದನ್ನು ಸಿದ್ಧಪಡಿಸಿದ ಮಾತ್ರಕ್ಕೆ ಬಾಲ್ಯವಿವಾಹದ ದುಷ್ಟ ಪದ್ಧತಿಯನ್ನು ತೊಡೆದುಹಾಕಿದಂತಾಗಲಿ ಇಲ್ಲವೆ ಹೆಂಣುಮಕ್ಕಳಿಗೆ ಸಮಾನ ಹಕ್ಕು-ಬಾಧ್ಯತೆಗಳನ್ನಿತ್ತಂತಾಗಲಿ ಭಾವಿಸ ಕೂಡದು. ಲಗ್ನವಾದೊಡನೆಯೆ ಒಂದುರೀತಿಯಲ್ಲಿ ನಮ್ಮ ದೃಷ್ಟಿಯಿಂದ ಮರೆಯಾಗುವ ಹುಡುಗೆಯರ ವಿಷಯವಾಗಿ ತುಸು ವಿಚಾರಿಸುವಾ. ಲಗ್ನವಾದ ನಂತರ ಅವರು ಸಾಲೆಗೆ ಬರುವುದಿಲ್ಲ. ತಮ್ಮ ಮಕ್ಕಳ ಬಾಲ್ಯ ವಿವಾಹದ ವರ್ಣನಾತೀತವೂ ಕಲ್ಪನಾತೀತವೂ ಆದ ಪಾಪಕ್ಕೆ ಕಾರಣರಾದ ಅವರ ತಾಯಂದಿರಲ್ಲಂತೂ ತಮ್ಮ ಮಕ್ಕಳಿಗೆ ಶಿಕ್ಷಣವೀಯುವ ಇಲ್ಲವೆ ಅವರ ನೀರಸ ಜೀವನವನ್ನು ಸುರಸವಾಗಿ ಮಾಡುವ ವಿಚಾರಸಹ ಮಾಡುವುದಿಲ್ಲ. ಚಿಕ್ಕ ಹುಡುಗೆಯನ್ನು ಮದುವೆಯಾಗುವ ಗಂಡಸು ಯಾರ ಉಪಕಾರಕ್ಕಾಗಿ ಹಾಗೆ ಮಾಡುವುದಿಲ್ಲ. ಅವನು ಮದುವೆಯಾಗುವುದು ತನ್ನ ಕಾಮವೃತ್ತಿಗಾಗಿ. ಹಾಗಾದರೆ ಹುಡುಗೆಯನ್ನು ಉದ್ಧರಿಸುವವರಾರು ? ಈ ಪ್ರಶ್ನೆಗೆ ನಾವು ಕೊಡುವ ಸಮಂಜಸ ಉತ್ತರವೆ ಸ್ತ್ರೀಸಮಸ್ಯೆಯನ್ನು ಬಿಡಿಸಲು ದಾರಿತೋರುವುದು. ಈ ಉತ್ತರ ಸ್ವಲ್ಪ ಗಡಚಾಗಿ ತೋರಿದರೂ ಅದರ ಹೊರತು ಅನ್ಯಥಾ ಮಾರ್ಗವಿಲ್ಲ. ಅವಳ ಪ್ರಶ್ನೆ ಎತ್ತಿಹಿಡಿಯುವುದು ಅವಳ ಗಂಡನಿಂದಲ್ಲದೆ ಬೇರಾರಿಂದಲೂ ಸಾಧ್ಯವಿಲ್ಲ. ಹಸುಳೆ ತನ್ನ ಗಂಡನ ಮನವನ್ನು ಮಾರ್ಪಡಿಸಲು ಪ್ರಯತ್ನಿಸಬೇಕೆಂಬ ಆಸೆ ತಳೆವುದು ಹುಚ್ಚುತನ. ಆದುದರಿಂದ ಈ ಕಠಿಣ ಸಮಸ್ಯೆ ಬಿಡಿಸುವ ಕಾರ್ಯವನ್ನು ಸದ್ಯಕ್ಕೆ ಪುರುಷನೆ ಕೈಗೊಳ್ಳಬೇಕು. ನನ್ನಲ್ಲಿ ಶಕ್ತಿಯಿದ್ದಿದ್ದರೆ ನಾನು ಬಾಲ್ಯವಿಧವೆಯರ ಜನಗಣತಿ ತೆಗೆದುಕೊಳ್ಳುತಿದ್ದೆ. ಬಾಳುವೆಯ ಗಂಟನ್ನು ಇಂಥ ಬಾಲ್ಯಪತ್ನಿಯರೊಂದಿಗೆ ಕಟ್ಟಿಕೊಳ್ಳುವ ಪತಿಗಳ ಗುರುತರ ಅಪರಾಧವನ್ನು ಅವರ ಮನಕ್ಕೆ ಬಿಂಬಿಸುವಂತೆ ನಮ್ರತೆಯಿಂದ ನೈತಿಕ ಉಪದೇಶ ಮಾಡುತಿದ್ದೆ. ಈ ವಾದದಿಂದ ಅವರು ಮುಕ್ತರಾಗಬೇಕಿದ್ದಲ್ಲಿ ಹೀಗೆ ಮಾಡಬೇಕು—ಮಕ್ಕಳನ್ನು ಹೆರುವುದಕ್ಕೂ ಮಕ್ಕಳನ್ನು

ಸರಿಯಾಗಿ ಆರೈಕೆ ಮಾಡುವುದಕ್ಕೂ ತಮ್ಮ ಹೆಂಡಂದಿರು ಸಮರ್ಥರಾಗುವಂತಹ ಶಿಕ್ಷಣವನ್ನು ಗಂಡಂದಿರೆ ತಮ್ಮ ಹೆಂಡಂದಿರಿಗೆ ಕೊಡಬೇಕು. ಹಾಗೂ ಆವರೆಗೆ ತಾವು ಬ್ರಹ್ಮಚರ್ಯದಿಂದಲೆ ಕಾಲ ಕಳೆಯಬೇಕು.

ಈ ರೀತಿಯಾಗಿ ಸೇವೆಗೈಯಲು ಈ ಭಗಿನಿ ಸಮಾಜದವರಿಗೆ ಅನೇಕ ಕಾರ್ಯಕ್ಷೇತ್ರಗಳಿವೆ. ಈ ಕಾರ್ಯ ಕ್ಷೇತ್ರ ವಿಶಾಲವಾದುದೇನ್ನೊ ನಿಜ, ಆದರೆ ಸೇವೆ ಸಲ್ಲಿಸಬೇಕೆಂಬ ದೃಢನಿರ್ಧಾರವಿದ್ದರೆ ದೊಡ್ಡದೊಡ್ಡ ಸುಧಾರಣೆಗಳ ಚಳುವಳಿಗಳನ್ನು ಸದ್ಯಕ್ಕೆ ಬಿಟ್ಟುಬಿಡಬಹುದು. ಈ ಬಗೆಯು ಸೇವೆಗೈಯುವುದೆಂದರೆ 'ಸ್ವರಾಜ್ಯ' ವೆಂಬ ಹೆಸರು ಉಚ್ಚರಿಸದೆಯೂ 'ಸ್ವರಾಜ್ಯ' ಪಡೆಯಲು ದೊಡ್ಡ ಸಹಾಯವಿತ್ತಂತೆಯೆ ಸರಿ. ಅಚ್ಚುಕೂಟದ ಸೌಕರ್ಯವಿಲ್ಲದಿರುವಾಗ, ಭಾಷಣ ಕೊಡಿಸುವ ಸೌಲಭ್ಯವಿಲ್ಲದಿರುವಾಗ ಈಗಿನಂತೆ ಸಾವಿರ ಮೈಲಿನಂತೆ ಇರದೆ ಗಂಟೆಗೆ ೨೪ ಮೈಲಿ ಪ್ರಯಾಣವೂ ಪ್ರಯಾಸವೆನಿಸುವ ಕಾಲದಲ್ಲಿ ನಮ್ಮ ಆದರ್ಶ ವಿಚಾರಗಳನ್ನು ಪ್ರಚಾರಪಡಿಸುವುದಕ್ಕೆ ಒಂದು ಸಾಧನವಿತ್ತು; ಅದುವೆ ನಮ್ಮ ಆಚರಣೆ. ಅದರ ಹಿಡಿತ ಅಗಾಧವಾದುದು. ಈಗ ಭಾಷಣವೀಯುತ್ತ, ಪತ್ರಿಕೆಗಳಲ್ಲಿ ಲೇಖನ ಬರೆಯುತ ನಾವು ಪೃಥ್ವಿಯ ಒಂದು ತುದಿಯಿಂದ ಮತ್ತೊಂದು ತುದಿಗೆ ಗಾಳಿ ವೇಗದಿಂದ ಹೋಗುತ್ತಿದ್ದೇವೆ. ಆದರೂ ನಾವು ನಮ್ಮ ಧ್ಯೇಯ ಸಾಧಿಸಿಲ್ಲ. ಬದಲು ನಿರಾಶೆಯ ನಿಟ್ಟುಸಿರು ಗಾಳಿದುಂಬ ಕೇಳಿಬರುತ್ತಿದೆ. ಹಿಂದಿನ ಕಾಲದಂತೆ ಈಗಲೂ ನಮ್ಮ ಜನಗಳಮೇಲೆ, ನಮ್ಮ ಭಾಷಣ-ಲೇಖನಗಳಿಗಿಂತ ನಮ್ಮ ಆಚರಣೆಯೆ ಪ್ರಭಾವಶಾಲಿಯಾದುದೆಂದು ನನ್ನ ನಮ್ರ ನಂಬುಗೆ. ಶಾಂತಚಿತ್ತದಿಂದಲೂ ಸ್ವಸಂತೋಷದಿಂದಲೂ ಕಾರ್ಯ ಮಾಡಬೇಕೆಂದೂ, ನೀವು ನೆರವೇರಿಸಬಲ್ಲ ಕಾರ್ಯವನ್ನೇ ನೀವು ಕೈಗೊಳ್ಳಬೇಕೆಂದೂ ನನ್ನ ಪ್ರಾರ್ಥನೆ.

ಗಾಂಧೀಜಿಯ ಭಾಷಣಗಳು ಮತ್ತು ಲೇಖನಗಳು ಪುಟ ೪೨೩.

೨೦—೨—೧೯೧೮.

# " ನವದಂಪತಿಗಳಿಗೆ "

[ ಸಂಯಮನ ಮತ್ತು ಇಂದ್ರಿಯ-ನಿಗ್ರಹ ಅರ್ಥವಿಹೀನವಾದುದು; ನಿರಂಕುಶ ಕಾಮತೃಪ್ತಿ।ಮತ್ತು ಸ್ವೈರಪ್ರೇಮವೆ ನೈಸರ್ಗಿಕವಾದುದೆಂಬುವಾಗಿ ಆಡಿಕೊಳ್ಳುವುದುಂಟು. ಇದಕ್ಕಿಂತ ಹೆಚ್ಚಿನ ವಿನಾಶಕರ ಮೂಢಭಾವನೆ ಬೇರೊಂದಿಲ್ಲ. ]

ಹುದಲಿ ಗಾಂಧೀ ಸೇವಾ ಸಂಘದ ವಾರ್ಷಿಕೋತ್ಸವದಲ್ಲಿ ಗಾಂಧೀಜಿಯವರ ಮೊಮ್ಮಗಳ ಮತ್ತು ಶ್ರೀ ಮಹದೇವ ದೇಸಾಯಿಯವರ ತಂಗಿಯ ಲಗ್ನ ಸಮಾರಂಭವಾಯಿತು. ಸಮಾರಂಭ ಮುಕ್ತಾಯವಾದ ನಂತರ ಗಾಂಧೀಜಿಯವರು ದಂಪತಿಗಳನ್ನು ಕುರಿತು ಇಂತು ಉಪದೇಶಿಸಿದರು:—

" ನಮ್ಮ ಕರ್ತವ್ಯ ಕರ್ಮಗಳ ಬಗ್ಗೆ ನಮಗೆ ಜ್ಞಾನವೀಯುವ ಮಟ್ಟಿಗಾಗಿ ಮಾತ್ರ ನಾನು ವಿಧಿಸಂಸ್ಕಾರಗಳಲ್ಲಿ ವಿಶ್ವಾಸವಿಟ್ಟಿದೇನೆಂದು ನೀವು ಅರಿತಿರಬೇಕು. ನನಗೆ ತಿಳಿವಳಿಕೆ ಬಂದಂದಿನಿಂದಲೆ ನಾನು ಈ ಅಭಿಪ್ರಾಯಕ್ಕೆ ಬಂದಿದೇನೆ. ನೀವು ಉಚ್ಚರಿಸಿದ ಮಂತ್ರಗಳು, ನೀವು ಮಾಡಿದ ಪ್ರತಿಜ್ಞೆಗಳು ಎಲ್ಲವೂ ಸಂಸ್ಕೃತ ಭಾಷೆಯಲ್ಲಿ. ಆದರೆ ನಿಮಗೆ ಅವುಗಳ ಅರ್ಥ ವಿವರಿಸಿ ಹೇಳಿದೆ. ನಮ್ಮನ್ನು ಆಕರ್ಷಿಸುವ ಶಕ್ತಿ ಸಂಸ್ಕೃತ ಪದಗಳಿಗಿರುವುದರಿಂದಲೆ ನಾವು ಅವುಗಳನ್ನು ಸಂಸ್ಕೃತದಲ್ಲಿ ಉಚ್ಚರಿಸುತ್ತೇವೆ.

'ದೃಢಕಾಯಕದ ಸುಶೀಲ ಪುತ್ರನನ್ನು ವಧುವು ಹೆರುವಂತವಳಾಗಲಿ' ಎಂಬುದು ಈ ಸಮಾರಂಭದ ಕಾಲದಲ್ಲಿ ಪತಿಯು ಪ್ರಕಟಿಸಿದ ಇಚ್ಛೆಗಳಲ್ಲೊಂದು. ಈ ಇಚ್ಛೆ ಕೇಳಿ ನಾ ಬೆಚ್ಚಿಬೀಳಲಿಲ್ಲ. ಇದರರ್ಥ ಸಂತಾನೋತ್ಪತ್ತಿಯೆ ಧರ್ಮಕಾರ್ಯವೆಂದಲ್ಲ. ಆದರೆ ಸಂತಾನದ ಇಚ್ಛೆಯಾದಲ್ಲಿ ಲಗ್ನಬಂಧನ ಧಾರ್ಮಿಕ ಭಾವನೆಯಿಂದೊಡಗೂಡಿರಬೇಕೆಂಬುದು ಅದರ ವಿಶಿಷ್ಟಾರ್ಥ. ಸಂತಾನದ ಇಚ್ಛೆಯಿಲ್ಲದವರು ಲಗ್ನವನ್ನೇ ಮಾಡಿಕೊಳ್ಳಕೂಡದು. ಕಾಮತೃಪ್ತಿಗಾಗಿ ಮಾಡಿಕೊಂಡ ಮದುವೆ ಮದುವೆಯಲ್ಲ. ಅದು ವ್ಯಭಿಚಾರವೇ ಸರಿ. ಇಂದಿನ ಲಗ್ನಸಂಸ್ಕಾರದ ಅರ್ಥವಿಷ್ಟೆ: ದಂಪತಿಗಳಿಬ್ಬರಿಗೂ ಮಕ್ಕಳ ಇಚ್ಛೆಯಾದರೆ ಮಾತ್ರ ಮೈ ಕೂಟಕ್ಕೆ ಅಪ್ಪಣೆಯುಂಟು. ಈ ಸಮಾರಂಭದ ಸಮಗ್ರ ಕಲ್ಪನೆ ಪವಿತ್ರವಾಗಿದೆ. ಆದುದರಿಂದ

ಈ ರತಿಸಂಬಂಧ ಬೆಳೆಸುವಾಗ ದಂಪತಿಗಳು ಪ್ರಾರ್ಥನಾಭಾವದಿಂದ ಕೂಡಬೇಕು. ಕಾಮವನ್ನು ಕೆರಳಿಸುವ ಶೃಂಗಾರ ಲೀಲೆಗಳ ಫಲವೆ ರತಿಕೃತಿಯೆಂದು ತಿಳಿಯಕೂಡದು. ಸಂತತಿ ಬೇಡವಾದಲ್ಲಿ ಈ ಪವಿತ್ರ ಮಿಲನ ಇಡಿಯ ಜೀವನದಲ್ಲಿ ಒಂದೇ ಬಾರಿಯೂ ಆಗಬಹುದು. ನೈತಿಕ ಹಾಗೂ ಶಾರೀರಿಕ ಆರೋಗ್ಯವಿಲ್ಲದಿದ್ದವರಿಗೆ ಸಂಭೋಗದ ಅಧಿಕಾರವೇ ಇಲ್ಲ. ಅವರು ಹಾಗೆ ಮಾಡಿದರೆ ಅದು ವ್ಯಭಿಚಾರ–ಕಾಮುಕತನವೆಂದೆಣಿಸಲ್ಪಡುವುದು. ವಿವಾಹ ಕಾಮತೃಪ್ತಿಗಾಗಿಯೆಂದು ನಿಮ್ಮ ತಿಳಿವಳಿಕೆಯಾಗಿದ್ದರೆ ಅದನ್ನು ನೀವು ತಳ್ಳಿಬಿಡಬೇಕು. ಇಂಥ ತಿಳಿವಳಿಕೆ ಒಂದು ಮೂಢಭಾವನೆಯೆ ಸರಿ. ಈ ವಿಧಿಸಂಸ್ಕಾರಗಳೆಲ್ಲ ಅಗ್ನಿಸಾಕ್ಷಿಯಾಗಿ ಜರುಗಿವೆ. ನಿಮ್ಮಲ್ಲಿಯ ಎಲ್ಲ ಕಾಮವಾಸನೆಗಳನ್ನು ಈ ಅಗ್ನಿ ಸುಟ್ಟು ಬೂದಿಮಾಡಲಿ.

ಇತ್ತಿತ್ತಲಾಗಿ ಪ್ರಬಲವಾಗಿ ರೂಢಿಗೊಳ್ಳುತ್ತಿರುವ ಮತ್ತೊಂದು ಮೂಢಭಾವನೆಯೊಂದರಿಂದ ನೀವು ದೂರವಾಗಿರಬೇಕೆಂದು ನಾನು ಬಯಸುತ್ತೇನೆ. ಆತ್ಮಸಂಯಮನ ಮತ್ತು ಇಂದ್ರಿಯನಿಗ್ರಹ ಅರ್ಥವಿಹೀನವಾದುದು; ನಿರಂಕುಶ ಕಾಮತೃಪ್ತಿ, ಸ್ವೈರಪ್ರೇಮವೆ ನೈಸರ್ಗಿಕವಾದುದೆಂಬುದಾಗಿ ಕೆಲವರು ಆಡಿಕೊಳ್ಳುವುದುಂಟು. ಇದಕ್ಕಿಂತ ಹೆಚ್ಚಿನ ವಿನಾಶಕರ ಮೂಢಭಾವನೆ ಬೇರೊಂದಿಲ್ಲ. ಉದಾತ್ತ ಧ್ಯೇಯವನ್ನು ಸಾಧಿಸಲು ನೀವು ಅಶಕ್ತರಿರಬಹುದು. ನಿಮ್ಮ ಮಾಂಸಮಜ್ಜದಲ್ಲಿ ಆ ಜಿಗುಟು ಇರಲಿಕ್ಕಿಲ್ಲ. ಆ ಕಾರಣದಿಂದ ಧ್ಯೇಯವನ್ನು ಕೆಳಕ್ಕೆಳೆಯಬೇಡಿ. ಅಧರ್ಮವನ್ನು ಧರ್ಮವನ್ನಾಗಿ ಮಾಡಬೇಡಿ. ದಾರಿಗಾಣದೆ ಕಂಗೆಟ್ಟಾಗ ನೀವು ನನ್ನ ಈ ವಚನವನ್ನು ಸ್ಮರಿಸಿ. ಈ ಸಂದರ್ಭ ನಿಮ್ಮ ಸ್ಮೃತಿಪಟಲದಲ್ಲಿ ಮೂಡಿಬಂದರೆ ಅದು ನಿಮಗೆ ಶಾಂತಿಯೀಯುವುದು ಆತ್ಮಬಲ ಕೊಡುವುದು. ಆತ್ಮಸಂಯಮನ ಮತ್ತು ಧರ್ಮದ ಬೆಂಬಲದಿಂದ ಕಾಮವನ್ನು ದಿವ್ಯಶಕ್ತಿಯನ್ನಾಗಿ ಪಲ್ಲಟಿಸುವದು ಲಗ್ನದ ಮುಖ್ಯ ಧ್ಯೇಯಗಳು. ಅದಲ್ಲದಿದ್ದರೆ ಮದುವೆ ಪವಿತ್ರ ಸಂಸ್ಕಾರವಾಗದು ಸಂತಾನೋತ್ಪಾದನೆಯಂಥ ಅನ್ಯ ಉದ್ದೇಶಗಳೆ ಅದರ ಗುರಿಯಿರಬೇಕೆಂದಾಗುವುದು.

'ಸರಿಸಮಾನರು, ಮಿತ್ರರು ಎಂಬ ಸೂತ್ರದಿಂದ ವಿವಾಹ ನಿಮ್ಮಿಬ್ಬರನ್ನೂ ಬಂಧಿಸಿದೆ. 'ಸ್ವಾಮಿ' ಎಂಬು ಗಂಡ ಸಂಬೋಧಿಸಲ್ಪಟ್ಟರೆ

'ಸ್ವಾಮಿನಿ' ಎಂದು ಹೆಂಡತಿಯು ಸಂಬೋಧಿಸಲ್ಪಡುವಳು. ಇಬ್ಬರೂ ಅನ್ಯೋನ್ಯ ಸಹಾಯಕರು. ಈ ಜೀವನದ ಕರ್ತವ್ಯಕರ್ಮಗಳಲ್ಲಿ ಸಮ ಪಾಲುಗಾರರು. ವರರಾದ ಗಂಡುಮಕ್ಕಳೆ! ದೇವರು ನಿಮಗೆ ಹೆಚ್ಚಿನ ಪ್ರಭೆಯನ್ನೂ ದಿವ್ಯತರವಾದ ಭಾವನೆಗಳನ್ನೂ ದಯಪಾಲಿಸಿದ್ದರೆ ಅವು ಗಳನ್ನು ನೀವು ನಿಮ್ಮ ಪತ್ನಿಯರೊಂದಿಗೆ ಸಮಪಾಲುಗೊಳ್ಳಿರಿ. ಅವರ ನಿಜವಾದ ಗುರುಗಳಾಗಿರಿ, ಧರ್ಮಮಾರ್ಗದರ್ಶಕರಾಗಿರಿ. ಅವರಿಗೆ ಸಹಾಯಕರಾಗಿರಿ. ಅವರ ಪ್ರಗತಿಗೆ ಅಡ್ಡಬರಬೇಡಿ. ಅಡ್ಡ ಮಾರ್ಗಕ್ಕೆ ಅವರನ್ನು ಒಯ್ಯಬೇಡಿ. ಪರಸ್ಪರರಲ್ಲಿ ಕಾಯಾ, ವಾಚಾ, ಮನಸಾ ಸಾಮರಸ್ಯವಿರಲಿ. ಯಾವ ಗುಟ್ಟನ್ನೂ ಒಬ್ಬರೊಬ್ಬರಿಂದ ಬಚ್ಚಿಡಬೇಡಿ. ಒಂದೇ ಆತ್ಮದಂತೆ ಜೀವಿಸಿರಿ!

ನೀವು ಕಪಟಿಗಳಾಗಬೇಡಿ. ನಿಮ್ಮಿಂದಾಗದ ಕಾರ್ಯ ಸಾಧಿಸಲು ವ್ಯರ್ಥ ಪ್ರಯಾಸಪಟ್ಟು ಆರೋಗ್ಯ ಹಾಳುಮಾಡಿಕೊಳ್ಳಬೇಡಿ. ಸಂಯಮನ ದಿಂದ ಆರೋಗ್ಯವೆಂದಿಗೂ ಕೆಡದು. ಆರೋಗ್ಯ ವಿನಾಶಕ್ಕೆ ಕಾರಣ ಆತ್ಮಸಂಯಮನವಲ್ಲ, ಮನೋವಿಕಾರಗಳ ಬಾಹ್ಯನಿಗ್ರಹ. ನಿಜವಾದ ಸಂಯಮಿಯ ಬಲವೂ ಶಾಂತಿಯೂ ದಿನದಿನಕ್ಕೂ ಬೆಳೆಯುತ್ತ ಹೋಗು ವವು. ಈ ಆತ್ಮಸಂಯಮನಕ್ಕೆ ವಿಚಾರನಿಗ್ರಹವೆ ಮೊದಲ ಮೆಟ್ಟಲು. ಹಾಸಿಗೆ ನೋಡಿ ಕಾಲು ಚಾಚಿ. ನಿಮ್ಮ ಶಕ್ತ್ಯಾನುಸಾರವಾಗಿ ಕೆಲಸ ಕೈಗೊಳ್ಳಿರಿ. ನಿಮ್ಮೆದುರಿನಲ್ಲಿ ಆದರ್ಶವಿಟ್ಟಿದೇನೆ. ಅದರ ಸಾಧನೆಯಲ್ಲಿ ನಿಮಗೆ ಸೋಲು ಬಂದರೆ ನಾಚಿಕೆಪಡಬೇಡಿ; ದುಃಖಕ್ಕೆಡೆಗೊಡಬೇಡಿ. ಉಪನಯನ ಹೇಗೆ ಒಂದು ದೀಕ್ಷೆಯೊ, ಒಂದು ನವಜನ್ಮವೊ, ಹಾಗೆಯೇ ವಿವಾಹವೂ ಒಂದು ದೀಕ್ಷೆ, ಒಂದು ನವಜನ್ಮ. ನನ್ನ ವಿಚಾರ ಕೇಳಿ ಎದೆ ಯೊಡೆದುಕೊಳ್ಳಬೇಡಿ. ನಿಮ್ಮ ವಿಚಾರ, ಉಚ್ಚಾರ, ಆಚಾರಗಳಲ್ಲಿ ಸಾಮರಸ್ಯವಿರಲಿ. ನಿಮ್ಮ ವಿಚಾರ ಸದಾ ಶುದ್ಧವಾಗಿಡಲು ಯತ್ನಿಸಿ. ಎಂದರೆ ಎಲ್ಲವೂ ಸುಗಮವಾಗುವುದು. ವಿಚಾರಶಕ್ತಿಗಿಂತ ಪ್ರಭಾವ ಶಾಲಿಯಾದ ಶಕ್ತಿ ಬೇರೊಂದಿಲ್ಲ. ಮನದ ಬಗೆಯೊಳಗಿಂದ ಮಾತು ಮಿಂಚಿ, ಮಾತನ್ನು ಕೃತಿ ಬೆಂಬತ್ತಿ ಬರುವುದು. ಬಲಿಷ್ಠವಾದೊಂದು ವಿಚಾರದ ಗರ್ಭದೊಳಗಿಂದ ಈ ಸೃಷ್ಟಿ ಹುಟ್ಟಿಬಂದಿದೆ ಈ ಬಗೆಯ ಫಲವೇ ಈ ಜಗ. ಆದುದರಿಂದ ವಿಚಾರ ಉಚ್ಚವಾಗಿದ್ದರೆ, ಶುದ್ಧವಾಗಿದ್ದರೆ ಅದರ

ಫಲ ಸರ್ವಶ್ರೇಷ್ಠವಾಗುವುದು. ಕಾರಣ ನೀವು ಈ ಘನ ಆದರ್ಶದ ಕವಚ ತೊಟ್ಟುಕೊಂಡು ಜೀವನದಲ್ಲಿ ಕಾಲಿಡಿರಿ. ಎಂದರೆ, ನಿಮಗೆ ವ್ಯಾಮೋಹ ವಾಗಲಿ ದೋಷವಾಗಲಿ ಆವುದೂ ತಟ್ಟದು.

ನಿಮಗೆ ವಿವರಿಸಿ ಹೇಳಿದ ಎಲ್ಲ ವಿಧಿಸಂಸ್ಕಾರಗಳನ್ನು ನೆನಪಿಟ್ಟು ಕೊಳ್ಳಿ. 'ಮಧುಪರ್ಕ'ದ ಸರಳವಿಧಿಯನ್ನೆ ನೀವು ತೆಗೆದುಕೊಳ್ಳಿ. "ಈ ವಿಶ್ವವೆಲ್ಲವೂ ಮಧುಭರಿತವಾದುದು. ಎಲ್ಲರೂ ತಮ್ಮ ಪಾಲು ಸವಿದ ನಂತರ ನೀವು ನಿಮ್ಮ ಪಾಲನ್ನು ಸವಿಯಬೇಕು." ಇದರ ತಾತ್ಪರ್ಯ ವಿಷ್ಟೆ—ತ್ಯಾಗದಿಂದಲೆ ಸುಖವುಂಟು.

"ಸಂತಾನೇಚ್ಛೆಯಿಲ್ಲದಿದ್ದರೆ ಮದುವೆಯು ಅಗತ್ಯವಿಲ್ಲವೆ?" ಎಂದು ಮದುವಣಿಗರೊಬ್ಬರು ಪ್ರಶ್ನಿಸಿದರು.

"ಖಂಡಿತವಾಗಿಯೂ, ಇಲ್ಲ ಪ್ಲೇಟೊ (Plato) ಹೇಳುವ ಆತ್ಮ ಸಂಬಂಧದ ವಿವಾಹಗಳಲ್ಲಿ ನನಗೆ ನಂಬುಗೆ ಇಲ್ಲ ವೈಕೂಟದ ವಿಚಾರವೇ ಇಲ್ಲದೆ, ಕೇವಲ ಸ್ತ್ರೀರಕ್ಷಣೆಗೋಸುಗ ಮದುವೆಯಾದ ಹಲವು ಉದಾಹರಣೆ ಗಳಿವೆ. ಆದರೆ ಇಂತಹವು ತೀರ ಕಡಮೆ ಪ್ರಮಾಣದಲ್ಲಿ. ಶುದ್ಧ ವೈವಾಹಿಕ ಜೀವನದ ವಿಷಯವಾಗಿ ನಾನು ಬರೆದುದೆಲ್ಲವನ್ನೂ ನೀವೆಲ್ಲರೂ ಅಗತ್ಯ ಓದಬೇಕು. ನಾನು ಮಹಾಭಾರತದಲ್ಲಿ ಓದಿದ ಮಾತು ದಿನದಿನಕ್ಕೆ ನನ್ನ ಮೇಲೆ ಒಳ್ಳೆಯ ಪ್ರಭಾವ ಬೀರುತ್ತಲಿವೆ. ವ್ಯಾಸರು ನಿಯೋಗಮಾಡಿದ ರೆಂದು ಅಲ್ಲಿ ಒಂದೆಡೆ ಬರೆದಿದೆ. ಆತ ಸುರಸುಂದರನೆಂದು ಎಲ್ಲಿಯೂ ವರ್ಣಿತವಾಗಿಲ್ಲ. ಆತನ ವರ್ಣನೆಯ ವಿಷಯ ಓದಿದರೆ ಆತ ಕುರೂಪಿ ಯೆಂದು ಸಹಜವಾಗಿ ತಿಳಿಯಬಹುದು. ಲಲ್ಲೆಗಾರಿಕೆ ಆತನಿಗೆ ತಿಳಿಯದು. ಅವನು ವೈಕೂಟಕ್ಕೆ ಮೊದಲು ದೇಹವೆಲ್ಲವನ್ನೂ ತುಪ್ಪದಿಂದ ತೊಡರಿದ್ದ. ಈ ಕೂಟ ಕಾಮತೃಪ್ತಿಗಾಗಿಯಲ್ಲ, ಸಂತಾನದ ಉತ್ಪತ್ತಿಗಾಗಿ. ಮಕ್ಕಳ ಬಯಕೆ ಸ್ವಾಭಾವಿಕವಾದುದು. ಆದರೆ ಬಯಕೆ ಒಮ್ಮೆ ಪೂರ್ಣವಾದ ನಂತರ ಈ ಸಂಪರ್ಕ ಪುನಃ ಎಂದಿಗೂ ಕೂಡದು.

ಜ್ಯೇಷ್ಠಪುತ್ರನನ್ನು ಧರ್ಮಜ—ಧರ್ಮಭಾವನೆಯಿಂದ ಜನಿಸಿದವ ನೆಂದೂ, ನಂತರ ಹುಟ್ಟಿದವರನ್ನು ಕಾಮಜ—ವಿಷಯಲಾಲನೆಯಿಂದ ಹುಟ್ಟಿ ದವರೆಂದೂ ಮನುವು ಹೇಳಿದಾನೆ. ಇದೆ ನರನಾರಿಯರ ಸಂಭೋಗದ

ಧರ್ಮಶಾಸನ. ಧರ್ಮಶಾಸನಕ್ಕಿಂತ ಬೇರೆ ದೇವರೆಲ್ಲಿ ? ಧರ್ಮವೆ ದೇವರು. ದೇವನಿಗೆ ವಿಧೇಯನಾಗಿರುವುದೆಂದರೆ ಧರ್ಮವನ್ನು ಪಾಲಿಸುವುದು. "ಎಂದಿಗೂ ಧರ್ಮವನ್ನು ಅತಿಕ್ರಮಿಸುವುದಿಲ್ಲ" (धर्मेनातिचरामि) ಎಂಬುದಾಗಿ ನೀವು ಮೂರಾವರ್ತಿ ಪ್ರತಿಜ್ಞೆಗೈಯ್ದುದನ್ನು ಲಕ್ಷಿಸಿರಿ. ಈ ಪ್ರತಿಜ್ಞೆಗೆ ಅನುಗುಣವಾಗಿ ಜೀವಿಸುವ ನರನಾರಿಯರ ಸಂಖ್ಯೆ ಬೆರಳ ಮೇಲೆಣಿಸುವಷ್ಟೆ ಇದ್ದರೂ ಪರವಿಲ್ಲ. ಅದರಿಂದ ಸತ್ಯಸಂಧರೂ ವಜ್ರಕಾಯಕರೂ ಆದ ಸ್ತ್ರೀ-ಪುರುಷರ ಕುಲವೊಂದು ನಮ್ಮಲ್ಲಿ ಬೆಳೆದು ಬರುವುದು.

'ಕಸ್ತೂರಬಾ' ಅವಳನ್ನು ಕಾಮುಕದೃಷ್ಟಿಯಿಂದ ನೋಡುವುದನ್ನು ತ್ಯಜಿಸಿದಂದಿನಿಂದಲೆ ನಾನು ನಿಜವಾದ ದಾಂಪತ್ಯ ಸುಖ ಅನುಭವಿಸತೊಡಗಿದೆನೆಂಬುದು ನೀವು ನೆನಪಿಡತಕ್ಕ ಸಂಗತಿ. ಯೌವನದ ಹುಮ್ಮಸ್ಸು ಇರುವಾಗಲೆ, ದಾಂಪತ್ಯಸುಖ ಅನುಭವಿಸುವ ವಯಸ್ಸಿರುವಾಗಲೆ ನಾನು ಬ್ರಹ್ಮಚರ್ಯಪಾಲನ ಪ್ರತಿಜ್ಞೆ ಕೈಗೊಂಡೆ. ಆವುದೊ ಮಹತ್ಕಾರ್ಯಕ್ಕಾಗಿ ಎಲ್ಲರಂತೆ ನಾನೂ ಜನಿಸಿದೇನೆಂಬ ವಿಚಾರ ಒಮ್ಮೆಗೆ ನನ್ನಲ್ಲಂಕುರಿತವಾಯಿತು. ನಾನು ಮದುವೆಯಾದಾಗ ಇದರ ಪರಿಚಯವೆ ನನಗಿರಲಿಲ್ಲ. ಆದರೆ ನನಗೆ ತಿಳಿವಳಿಕೆ ಬಂದನಂತರ ಈ ಮಹತ್ಕಾರ್ಯ ಪೂರ್ಣಗೈಯುವುದಕ್ಕೆ ಮದುವೆಯನ್ನು ಒಂದು ಸಾಧನವನ್ನಾಗಿ ಮಾಡಿಕೊಂಡೆ. ಆಗಲೆ ನನಗೆ ಧರ್ಮದ ತಿರುಳು ತಿಳಿದುದು. ಈ ಪ್ರತಿಜ್ಞೆ ಕೈಗೊಂಡನಂತರವೆ ನಮ್ಮ ಜೀವನ ಸುಖಮಯವಾಯಿತು. ಹೊರನೋಟದಿಂದ 'ಬಾ' ದುರ್ಬಲಳಾಗಿ ತೋರಬಹುದು. ಆದರೆ ಅವಳ ದೇಹದಾರ್ಢ್ಯವು ಚೆನ್ನಾಗಿದೆ. ಬೆಳಗಿನಿಂದ ಬೈಗಿನವರೆಗೂ ಮೈಮುರಿದು ದುಡಿಯಬಲ್ಲಳು. ಅವಳು ನನ್ನ ಕಾಮುಕ್ರೀಡೆಗೆ ಬಲಿಬಿದ್ದಿದ್ದರೆ ಅವಳಿಗೆ ಇದು ಸಾಧ್ಯವಾಗುತ್ತಿರಲಿಲ್ಲ.

ತಡವಾದರೂ ಕೊನೆಗೆ ನಾನು ಎಚ್ಚತ್ತೆ. ಆದರೆ ಮೊದಲಲ್ಲಿಯೆ ನಿಮಗೆ ಎಚ್ಚರ ದೊರೆತುದಕ್ಕಾಗಿ ನೀವು ನಿಜವಾಗಿಯೂ ಭಾಗ್ಯವಂತರು. ಆಗಿನ ವಾತಾವರಣ ಇದಕ್ಕೆ ಅಷ್ಟೊಂದು ಹಿತಕರವಾಗಿರಲಿಲ್ಲ. ಆದರೆ ಈಗಿನ ವಾತಾವರಣ ನಿಮಗೆ ಮಂಗಲಪ್ರದಾಯಕವಾಗಿದೆ. ಆದರೂ ಆಗ ನನ್ನಲ್ಲಿ ಒಂದು ಬಲವಿತ್ತು. ಅದು ನನ್ನನ್ನು ಎಲ್ಲ ಸಂಕಟಗಳಿಂದಲೂ ಪಾರುಗಾಣಿಸಿತು. ಅದುವೆ ಸತ್ಯವೆಂಬ ಕವಚ. ಅದು ನನ್ನನ್ನು ರಕ್ಷಿಸಿತು,

ಬದುಕಿಸಿತು. ಸತ್ಯವೆ ನನ್ನ ಜೀವನದ ಅಡಿಗಲ್ಲು. ಬ್ರಹ್ಮಚರ್ಯ, ಅಹಿಂಸೆ ಅದರ ಅನಂತರದ ಆವಿರ್ಭಾವಗಳು ನೀವು ಯಾವ ಕಾರ್ಯ ಗಳನ್ನೆ ಮಾಡಿ, ಆದರೆ ಸತ್ಯವನ್ನೆಂದಿಗೂ ವಂಚಿಸಬೇಡಿ. ನಿಮ್ಮ ವಿಚಾರ ಗಳನ್ನು ಮುಚ್ಚಿಡಬೇಡಿ. ಅವುಗಳನ್ನು ಹೊರಗೆಡಹುವುದೇ ನಾಚಿಕೆ ಗೇಡಾದರೆ, ಅವುಗಳನ್ನು ಕುರಿತು ಮನದಲ್ಲಿ ವಿಚಾರಿಸುವುದು ಅದಕ್ಕಿಂತಲೂ ಹೆಚ್ಚು ನಾಚಿಕೆಗೇಡೆಂದು ತಿಳಿಯಿರಿ.

ಹರಿಜನ, ೨೪-೪-೧೯೩೭

# "ಬೆರಗುಗೊಳಿಸುವ ನಿರ್ಣಯಗಳು"

[ ತನುಮನಗಳೆರಡೂ ಸಹಕರಿಸಿದಲ್ಲಿ ಕಾಮಭೋಗದ ತ್ಯಾಗದಿಂದ ರೋಗ ವೇನೂ ಉಂಟಾಗದೆ ಆರೋಗ್ಯ ಉಲ್ಲಾಸಗಳು ಹೆಚ್ಚುವುವೆಂದು ಸ್ತ್ರೀ-ಪುರುಷರು ಮನದಟ್ಟು ಮಾಡಿಕೊಳ್ಳಲಿ. ]

ಶ್ರೀ ವಿಲಿಯಮ್ ಆರ್. ಥರ್ಸ್ಟನ್ ಎಂಬವರು ಅಮೇರಿಕೆಯ ಸೈನ್ಯ ಖಾತೆಯಲ್ಲಿ ಮೇಜರ್‌ರಾಗಿ ೧೦ ವರ್ಷ ಸೇವೆ ಸಲ್ಲಿಸಿದರಾಗಿ ಪ್ರಕಾಶಕರು ತಮ್ಮ ನಿವೇದನೆಯಲ್ಲಿ ಹೇಳಿದಾರೆ. ಈ ಅವಧಿಯಲ್ಲಿ ವಿಲಿಯಮ್‌ರವರು ಚೀನ ಆದಿ ಜಗತ್ತಿನ ಅನೇಕ ಭಾಗಗಳಲ್ಲಿ ಅಲೆದು ವಿವಿಧ ಅನುಭವ ಪಡೆದಿದಾರೆ. ಈ ಕಾಲದಲ್ಲಿಯೆ ಅವರು ಜಗತ್ತಿನ ವಿವಾಹದ ಶಾಸ್ತ್ರ-ಸಂಪ್ರದಾಯಗಳ ಪರಿಣಾಮಗಳ ವಿಷಯವಾಗಿ ಅಭ್ಯಾಸಮಾಡಿದರು. ಅದರ ಫಲವಾಗಿ ವಿವಾಹವಿಷಯಕವಾದ ಹೊತ್ತಗೆಯೊಂದನ್ನು ಬರೆಯಲು ಅವರಿಗೆ ಪ್ರೇರಣೆಯಾಯಿತು. ಅವರ ಪುಸ್ತಕದ ಹೆಸರು "ಥರ್ಸ್ಟನ್ನರ ವೈವಾಹಿಕ ತತ್ವಜ್ಞಾನ". ನ್ಯೂಯಾರ್ಕಿನ ಟಿಫಾನಿ ಅಚ್ಚುಕೂಟದವರೆ ಅದರ ಪ್ರಕಾಶಕರು. ದೊಡ್ಡಕ್ಕರದ ೩೨ ಪುಟಗಳ ಈ ಪುಸ್ತಿಕೆಯನ್ನು ಒಂದು ಗಂಟೆಕಾಲದೊಳಗೆ ಓದಿ ಮುಗಿಸಬಹುದು. ಲೇಖಕರು ಸುದೀರ್ಘ ವಾದ ವಿವಾದದ ಗೋಜಿಗೆ ಹೋಗದೆ ಕೇವಲ ತಮ್ಮ ನಿರ್ಣಯಗಳನ್ನು ಮುಂದಿಟ್ಟಿದ್ದಾರೆ. "ಈ ನಿರ್ಣಯಗಳು ನಿಜವಾಗಿಯೂ ಬೆರಗುಗೊಳಿಸು ವಂತಹವು" ಎಂಬ ಪ್ರಕಾಶಕರ ಮಾತು ಯಥಾರ್ಥವಾದುದು. ಸ್ವನಿರೀಕ್ಷಣೆ

ಯಿಂದಲೂ ಚಿಕಿತ್ಸಕಜ್ಞಾನವೇತ್ತರಿಂದ ಪಡೆದ ಸಿದ್ಧಾಂತ (data) ಗಳಿಂದಲೂ ಸಾಮಾಜಿಕ ಆರೋಗ್ಯಶಾಸ್ತ್ರ ಹಾಗೂ ವೈದ್ಯಕಶಾಸ್ತ್ರಗಳ ಅಂಕೆಸಂಖ್ಯೆಗಳಿಂದಲೂ ಈ ನಿರ್ಣಯಗಳಿಗೆ ಬಂದಿದೇನೆಂಬುದಾಗಿ ಲೇಖಕರು ತಮ್ಮ ಮುನ್ನುಡಿಯಲ್ಲಿ ಬರೆದಿದಾರೆ. ಅವರ ನಿರ್ಣಯಗಳಿವು :–

(೧) ಸ್ತ್ರೀಯು ತನ್ನ ಜೀವನಾದ್ಯಂತ ಪುರುಷನೊಬ್ಬನ ಅಧೀನ ದಲ್ಲಿರಬೇಕೆಂಬುದಾಗಿಯಾಗಲಿ, ತನ್ನ ಹೊಟ್ಟೆಪಾಡಿಗಾಗಿ, ಮಕ್ಕಳನ್ನು ಹೆರುವ ತನ್ನ ನೈಸರ್ಗಿಕ ಅಧಿಕಾರ ಉಪಭೋಗಿಸುವುದಕ್ಕಾಗಿ ಗಂಡ ನೊಂದಿಗೆ, ತಾನು ಗರ್ಭವತಿಯಾಗಿರಲಿ ಬಿಡಲಿ, ಪ್ರತಿ ರಾತ್ರಿ ಒಂದೆ ಕೋಣೆ, ಒಂದೆ ಹಾಸುಗೆ ಉಪಯೋಗಿಸಲೆಬೇಕೆಂಬುದಾಗಿಯಾಗಲಿ ನಿಸರ್ಗವು ಎಂದಿಗೂ ಇಚ್ಛಿಸುವುದಿಲ್ಲ.

(೨) ಆಧುನಿಕ ವೈವಾಹಿಕ ಸಂಸ್ಕಾರ ಸಂಪ್ರದಾಯಗಳ ಪರಿಣಾಮ ವಾಗಿ ದಂಪತಿಗಳು ದಿನರಾತ್ರಿಯನ್ನದೆ ಒಂದೆಡೆಗೆ ಇರುವ ಮೂಲಕ ವ್ಯೈಕೂಟ ಅಬಾಧಿತವಾಗಿ ಸಾಗುವುದು. ಇದರ ಫಲಿತಾಂಶ, ಸ್ತ್ರೀ-ಪುರುಷ ರಿಬ್ಬರ ಸಹಜ ಪ್ರವೃತ್ತಿಗಳು ಮಂಕಾಗಿ ನೂರರಲ್ಲಿ ೯೦ ಜನ ಸ್ತ್ರೀಯರು ವ್ಯಭಿಚಾರ ಜೀವನ ಸಾಗಿಸುವಂತಾಗಿದೆ. 'ಇಂಥ ವ್ಯಭಿಚಾರ ಯೋಗ್ಯ ವಾದುದು, ನೈಸರ್ಗಿಕವಾದುದು. ಸಮಾಜವೂ ಇದಕ್ಕೆ ತನ್ನ ಒಪ್ಪಿಗೆ ಯನ್ನಿತ್ತಿದೆ. ಅಲ್ಲದೆ ತಮ್ಮ ಗಂಡಂದಿರ ಮನವನ್ನು ಆಕರ್ಷಿಸಲು ಇದು ಅತ್ಯವಶ್ಯ' ವೆಂಬ ಧೋರಣೆಯನ್ನು ಸ್ತ್ರೀಯರು ತಳೆಯುವಂತಾದುದೆ ಈ ಪರಿಸ್ಥಿತಿಗೆ ಮೂಲಕಾರಣ.

ಅನಂತರ ಲೇಖಕರು ಅತಿಸಂಭೋಗದ ಪರಿಣಾಮಗಳ ವಿಷಯವಾಗಿ ಬರೆದಿದಾರೆ. ಅದನ್ನು ಸಂಕ್ಷೇಪವಾಗಿ ಕೆಳಗೆ ಕೊಟ್ಟಿದೇನೆ.

(ಅ) ಇದರಿಂದ ಸ್ತ್ರೀಯರು ದುರ್ಬಲರಾಗುವರು. ರೋಗರುಜನ ಗಳಿಗೆ ತುತ್ತಾಗುವರು. ಅವರ ಮುಖದಲ್ಲಿ, ಅಕಾಲದಲ್ಲೇ, ಮುಪ್ಪಿನಕಳೆ ದೋರುವುದು. ಅವರಲ್ಲಿ ಸಿಡುಕುತನ ಹೆಚ್ಚುವುದು. ಅವರ ಮನದ ನೆಮ್ಮದಿ ಹಾರಿಹೋಗುವುದು. ಇದಲ್ಲದೆ ಮಕ್ಕಳ ಹಿತರಕ್ಷಣೆಮಾಡಲೂ ಅಸಮರ್ಥರಾಗುವರು.

. (ಬ) ಬಡವರ್ಗದವರಲ್ಲಿ ಅನಗತ್ಯವಾದ ಸಂತಾನವೃದ್ಧಿಯಾಗುವುದು.

(ಕ) ಧನಿಕವರ್ಗದಲ್ಲಿ ಗರ್ಭಸ್ರಾವ, ಗರ್ಭಪ್ರತಿಬಂಧ ಮುಂತಾದವುಗಳಿಗೆ ಎಡೆಯುಂಟುಮಾಡುವುದು. ಕೃತ್ರಿಮ ಗರ್ಭಪ್ರತಿಬಂಧಕ ಅಥವಾ ಬೇರೆ ಹೆಸರಿನ ಗರ್ಭನಿರೋಧಕ ಉಪಾಯಗಳನ್ನು ಹೆಂಣುಮಕ್ಕಳಿಗೆ ನಾವು ಕಲಿಸಿದರೆ ಭಾವೀ ಮಾನವಕುಲ ಸ್ವಭಾವತಃ, ರೋಗಿಷ್ಠವಾಗಿ, ನೈತಿಕ ಬಲಹೀನವಾಗಿ, ಹತವೀರ್ಯವಾಗಿ ನಾಶವಾಗುವುದು (ದೊಡ್ಡಕ್ಷರ ಲೇಖಕರದು).

(ಡ) ಅತಿಸಂಭೋಗದಿಂದ ವೀರ್ಯನಾಶವಾಗುವುದು ಮತ್ತು ಸುಖಜೀವನಕ್ಕೆ ಪೋಷಕವಾದ ಶಕ್ತಿಯು ಹ್ರಾಸವಾಗುವುದು. ಈಗ ಅಮೇರಿಕೆಯಲ್ಲಿ ವಿಧುರರಿಗಿಂತ ೨೦ ಲಕ್ಷ ಹೆಚ್ಚು ವಿಧವೆಯರಿದಾರೆ. ಇವರಲ್ಲಿ ಯುದ್ಧಮೂಲಕ ವಿಧವೆಯರಾದವರ ಸಂಖ್ಯೆ ತೀರ ಕಡಮೆ.

(ಇ) ಈಗಣ ವೈವಾಹಿಕಜೀವನದಲ್ಲಿಯ ಅತಿಸಂಭೋಗವು ದಂಪತಿಗಳಲ್ಲಿ ನಿರಾಶಾವಾದಕ್ಕೆ ಪುಟವಿತ್ತಿದೆ. ಜಗತ್ತಿನ ಬಡತನಕ್ಕೂ ದೊಡ್ಡ ನಗರಗಳ ಹೀನದೀನರ ಹೊಲೆಗೇರಿಗಳಿಗೂ ಕುಶಲಶ್ರಮದ ಕೊರತೆ ಮುಖ್ಯ ಕಾರಣವಲ್ಲ. ಆದರೆ ಈಗಿನ ವೈವಾಹಿಕ ಸಂಪ್ರದಾಯಗಳ ಪರಿಣಾಮದ ಫಲಸ್ವರೂಪವಾದ ನಿಗ್ರಹವಿಲ್ಲದ ಅತಿಸಂಭೋಗವೆ ಮೂಲ ಕಾರಣ.

(ಫ) ಭಾವೀ ಪೀಳಿಗೆಯ ಹಿತದೃಷ್ಟಿಯಲ್ಲಿ, ಗರ್ಭವತಿಯನ್ನು ಸಂಭೋಗಿಸುವ ಕಾರ್ಯ ಅತಿ ಖೇದಾಸ್ಪದ ವಿಷಯ.

ಬಳಿಕ ಲೇಖಕರು ಚೀನ – ಭರತಖಂಡಗಳಮೇಲೆ ಆಪಾದನೆ ಹೊರಿಸಿದಾರೆ. ಆ ವಿಷಯ ಈಗ ನಮಗೆ ಬೇಕಿಲ್ಲ. ಇಲ್ಲಿಗೆ ಅರ್ಧ ಪುಸ್ತಕ ಮುಗಿಯುವುದು. ಉಳಿದರ್ಧದಲ್ಲಿ ನಿವಾರಣೋಪಾಯದ ವಿಷಯವಾಗಿ ಬರೆದಿದಾರೆ.

ಅದರ ಮುಖ್ಯಾಂಶವಿಷ್ಟೆ :—ದಂಪತಿಗಳು ಬೇರೆ ಬೇರೆ ಕೋಣೆಯಲ್ಲಿ ಮಲಗಬೇಕು ; ಎಂದರೆ ಬೇರೆಬೇರೆ ಹಾಸಿಗೆಯಲ್ಲಿ ಮಲಗಬೇಕು. ಅವರಲ್ಲಿ, ಮುಖ್ಯವಾಗಿ ಸ್ತ್ರೀಗೆ ಮಕ್ಕಳ ಬಯಕೆಯಾದಾಗ ಮಾತ್ರ

ಸಂಭೋಗಿಸಬೇಕು. ವೈವಾಹಿಕ ಸಂಪ್ರದಾಯಗಳ ಸುಧಾರಣೆಗೆ ಲೇಖಕರ ಹಲವು ಸೂಚನೆಗಳನ್ನು ನಾನಿಲ್ಲಿ ಕೊಡಲಿಚ್ಛಿಸುವುದಿಲ್ಲ. ಜಗತ್ತಿನಲ್ಲೆಲ್ಲಿ ನೋಡಿದರೂ ದಂಪತಿಗಳಿಗೆ ಒಂದೆ ಕೋಣೆ, ಒಂದೆ ಹಾಸಿಗೆ ಎಂಬುದು ಸರ್ವಸಾಮಾನ್ಯ ವಿಷಯವಾಗಿದೆ. ಆ ಬಗ್ಗೆ ಲೇಖಕರು ಕಟುವಾಗಿ ಟೀಕಿಸಿ ದಾರೆ. ಅದರಲ್ಲಿ ಸತ್ಯಾಂಶವಿದೆಯೆಂದು ಹೇಳಲು ನಾನೂ ಧೈರ್ಯಮಾಡುವೆ. ದಂಪತಿಗಳು ಒಂದೇ ಕೋಣೆಯಲ್ಲಿ, ಒಂದೇ ಹಾಸಿಗೆಯಲ್ಲಿ ಮಲಗಬೇಕೆಂಬ ಕುರುಡುನಂಬಿಗೆ ನಮ್ಮಲ್ಲಿ ಸ್ತ್ರೀ-ಪುರುಷರಿಬ್ಬರಲ್ಲಿಯೂ ಬೇರೂರಿದೆ. ಅಲ್ಲದೆ ಅದಕ್ಕೆ ಧರ್ಮದ ಮುದ್ರೆಯೂ ಬಿದ್ದಿದೆ. ಈ ಕಾರಣದಿಂದ ನಮ್ಮಲ್ಲಿ ವಿಷಯಾಸಕ್ತಿ ಬೆಳೆದಿದೆ. ಈ ಕುರುಡು ನಂಬಿಗೆಯ ವಾತಾವರಣದಲ್ಲಿಯೆ ಬೆಳೆದ ನಮಗೆ ಈ ಮೂಢ ನಂಬಿಗೆಯಿಂದಾದ ಹಾನಿಯನ್ನು ತಿಳಿದುಕೊಳ್ಳ ಲಾರದಷ್ಟು ಬುದ್ಧಿಯೂ ಮಂಕಾಗಿದೆ.

ಲೇಖಕರು ಕೃತ್ರಿಮ ಗರ್ಭನಿರೋಧಕ ಉಪಾಯಗಳಿಗೆ ವಿರೋಧಿಸಿ ದಾರೆ.

ಅವರು ಸೂಚಿಸಿದ ಅನೇಕ ಉಪಾಯಗಳು ಅಷ್ಟೊಂದು ವ್ಯಾವಹಾರಿಕ ವಾದುವೆಂದು ನನಗೆ ತೋರುವುದಿಲ್ಲ. ಅಲ್ಲದೆ ಅವುಗಳಿಗಾಗಿ ಕಾಯಿದೆ ಕಾನೂನಿನ ಕಟ್ಟು ಏರಬೇಕಾಗುವುದು. ಆದರೆ ದಂಪತಿಗಳು, ತಾವಿನ್ನು ಮುಂದೆ ಒಂದೇ ಹಾಸಿಗೆಯಮೇಲೆ ಮಲಗುವುದಿಲ್ಲ ಹಾಗೂ ಸಂತಾನದ ಹೇತುವಲ್ಲದೆ ಬೇರಾವಕಾರಣ ಒಗ್ಗೂಟ ಮಾಡುವುದಿಲ್ಲವೆಂಬ ದೃಢ ನಿರ್ಧಾರ ಮಾಡಬೇಕು. ಮಾನವನಿಗೂ ಪಶುವಿಗೂ ಸಂತಾನೋತ್ಪತ್ತಿಯೆ ಸಂಭೋಗದ ಮೂಲೋದ್ದೇಶ.

ಪಶುಗಳೂ ತಮ್ಮ ನಿಯಮಗಳನ್ನು ಅಚ್ಚುಕಟ್ಟಾಗಿ ಪಾಲಿಸುತ್ತವೆ. ಆದರೆ ದೇವರು ಮಾನವನಿಗೆ ಬುದ್ಧಿಬಲವಿತ್ತರೂ ಆತ ತಪ್ಪುದಾರಿಯನ್ನರಿಸಿ ಮಹಾಪರಾಧ ಮಾಡುತ್ತಾನೆ. ಗರ್ಭನಿರೋಧಕ ಕೃತ್ರಿಮ ಉಪಾಯಗಳನ್ನು ಪ್ರತಿಯೊಬ್ಬ ಸ್ತ್ರೀಯೂ ಧಿಕ್ಕರಿಸಬೇಕು. ತನುಮನ ಗಳೆರಡೂ ಸಹಕರಿಸಿದಲ್ಲಿ ಕಾಮಭೋಗದ ತ್ಯಾಗದಿಂದ ರೋಗವೇನೂ ಉಂಟಾಗದೆ ಆರೋಗ್ಯ ಉಲ್ಲಾಸಗಳು ಹೆಚ್ಚುವವೆಂದು ಸ್ತ್ರೀ-ಪುರುಷರು ಮನದಟ್ಟುಮಾಡಿಕೊಳ್ಳಲಿ. "ನಮ್ಮ ವಿವಾಹದ ಶಾಸ್ತ್ರ-ಸಂಪ್ರದಾಯ ಗಳೆ ಜಗತ್ತಿನ ಬಹ್ವಂಶ ಕೇಡುಗಳಿಗೆ ಮೂಲಕಾರಣವಾಗಿವೆ" ಎಂದು

ಲೇಖಕರ ನಂಬಿಗೆ. ನಾನು ಮೇಲೆ ವಿವರಿಸಿದ ಎರಡು ನಿರ್ಣಯಗಳಿಗೆ ಬರಲು, ಲೇಖಕರ ಈ ದುಡುಕುತನದ ನಂಬಿಗೆಗೆ ಒಳಗಾಗಬೇಕಾಗಿಲ್ಲ. ಆದರೆ ಸ್ತ್ರೀ-ಪುರುಷರು ಲೈಂಗಿಕ ಸಂಬಂಧವನ್ನು ವಿವೇಕದ ಪವಿತ್ರ ಪ್ರಕಾಶಮಯ ದೃಷ್ಟಿಯಿಂದ ನೋಡಿದರೆ ಹಾಗೂ ಭಾವಿಪೀಳಿಗೆಯ ನೈತಿಕ ಕಲ್ಯಾಣಕ್ಕಾಗಿ ನಾವು ಧರ್ಮದರ್ಶಿಗಳೆಂಬ ಭಾವನೆಯಿಟ್ಟುಕೊಂಡರೆ ಇಂದಿನ ಜಗದ ದುಃಖತಾಪಗಳ ಬಹ್ವಂಶವು ದೂರವಾಗುವುದರಲ್ಲಿ ಸಂದೇಹವಿಲ್ಲ.

**ಯಂಗ್ ಇಂಡಿಯಾ, ೨೭-೯-೧೯೨೮**

# " ಅರಣ್ಯರೋದನ "

[ ವ್ಹಿಸ್ಕಿ (ಸೆರೆ) ಗಿಂತ ಈ ಕೃತ್ರಿಮ ಗರ್ಭನಿರೋಧದ ಉಪಯೋಗ ನಮ್ಮನ್ನು ಹೆಚ್ಚು ವಿಲೋಭನಪಡಿಸುವಂತಹದು. ಆದರೆ ಪ್ರಾಣಾಪಾಯಕರವಾದ ಮೋಹಕತ್ವದ ಮೂಲಕ ಸೆರೆಯಂತೆ ಇದಾದರೂ ಎಷ್ಟುಮಾತ್ರಕ್ಕೂ ಶಾಸನ ಸಮ್ಮತವಾಗಲಾರದು. ಅವುಗಳ ಉಪಯೋಗ ದಿನದಿನಕ್ಕೂ ಹೆಚ್ಚುತ್ತಿದೆಯೆಂಬ ನಿರಾಶೆಯಲ್ಲಿ ಅವುಗಳನ್ನು ಪ್ರತಿಬಂಧಿಸುವ ಪ್ರಯತ್ನ ನಾವೆಂದಿಗೂ ಬಿಟ್ಟುಕೊಡಬಾರದು. ]

ಕೃತ್ರಿಮ ಗರ್ಭಪ್ರತಿಬಂಧಕೋಪಾಯದ ಪ್ರತಿವಾದಕಳಾದ ಶ್ರೀಮತಿ ಸಾಂಗರ್ ಮತ್ತು ನಿಮ್ಮ ಸಂಭಾಷಣೆಯ ವಿಮರ್ಶೆಯನ್ನು ನಾನು ಇದೀಗ ಓದಿದೆ. ನೀವು ತಳೆದ ಧೋರಣೆನೋಡಿ ನನಗೆ ತುಂಬ ಆಹ್ಲಾದವಾದುದರಿಂದ ನನ್ನ ಹೃದಯಾನಂದವನ್ನು ತಿಳಿಸಲು ನಿಮಗೆ ಇದೀಗ ಬರೆಯುತ್ತಿದ್ದುದು. ನಿಮ್ಮ ಈ ಧೈರ್ಯಕ್ಕಾಗಿ ದೇವರು ನಿಮ್ಮನ್ನು ಹರಿಸಲಿ.

ಈ ೩೦ ವರುಷಗಳಿಂದ ನಾನು ಉಪಾಧ್ಯಾಯವೃತ್ತಿಯಲ್ಲಿದ್ದೇನೆ. ಮೊದಲಿನಿಂದಲೂ 'ಇಂದ್ರಿಯನಿಗ್ರಹ' ವನ್ನೇ ಪ್ರತಿಪಾದಿಸುತ್ತ ಬಂದಿದೇನೆ; ಅಲ್ಲದೆ ವಿದ್ಯಾರ್ಥಿಗಳಿಗೆ ನಿಸ್ವಾರ್ಥ ಜೀವನಗೈಯಲು ಉಪದೇಶಿಸುತ್ತಿದ್ದೇನೆ.

ಶ್ರೀಮತಿ ಸಾಂಗರ್ ನಮ್ಮ ನೆರೆಯಲ್ಲಿದ್ದಾಗ ನಮ್ಮ ಶಾಲೆಯ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಕೃತ್ರಿಮ ಗರ್ಭನಿರೋಧಕ ವಿಚಾರಗಳನ್ನು

ತಿಳಿದು ಪರಿಣಾಮ ಲೆಕ್ಕಿಸದೆ ಅವುಗಳ ಪ್ರಯೋಗ ನಡೆಸಿದರು. ಶ್ರೀಮತಿ ಸಾಂಗರಳ ಪ್ರತಿಪಾದನೆಯೆ ಜಗತ್ತಿನಲ್ಲೆಲ್ಲ ಹಬ್ಬಿದರೆ ಲೋಕವೆಲ್ಲವೂ ಕೇವಲ ವಿಷಯಲಾಲಸೆಯಲ್ಲಿಯೆ ಮುಳುಗಿಬಿಟ್ಟು ನೈಜಪ್ರೇಮಕ್ಕೆ ಎಡೆಯುಳಿಯದಂತಾಗುವುದು. ಲೋಕದ ದೃಷ್ಟಿಯನ್ನು ಉದಾತ್ತ ಆದರ್ಶದ ಮಟ್ಟಕ್ಕೆ ಎತ್ತಬೇಕಾದಲ್ಲಿ ನೂರಾರು ವರುಷ ಸಾಲದೆಂಬುದನ್ನೂ ನಾನು ಬಲ್ಲೆ. ಆದರೆ ಆ ಕಾರ್ಯ ಕೈಗೊಳ್ಳಲು ಇಂದಿನಂಥ ಸುಸಂಧಿ ಬೇರೊಂದಿಲ್ಲ. ಅವಳು ಕಾಮಲಾಲಸೆಯೆ ಪ್ರೇಮವೆಂದು ಮೋಸಹೋಗಿ ದಾಳೆಂದು ನನ್ನ ನಂಬಿಕೆ. ಏಕೆಂದರೆ ಪ್ರೇಮ ಹುಟ್ಟುವುದು ಅಂತಃಕರಣ ದಿಂದಲ್ಲದೆ, ಲಾಲಸೆಯಿಂದಲ್ಲ. ಮೋಹಕ್ಕೆ ಬಲಿಯಾಗಿ ಇಂದ್ರಿಯನಿಗ್ರಹ ಮಾಡಲು ಅಸಮರ್ಥರಾದ ವಿವೇಕಹೀನರನ್ನು ಬಿಟ್ಟು, ಉಳಿದವರಿಗೆ ಇಂದ್ರಿಯನಿಗ್ರಹದಿಂದ ಯಾವ ಹಾನಿಯೂ ಇಲ್ಲವೆಂದು ನಿಮ್ಮಂತೆ ಡಾ|| ಅಲೆಕಾರೆಲ್ಲರೂ (Dr. Alexis Carrel) ಒಪ್ಪಿದಾಗ, ಇಂದ್ರಿಯ ನಿಗ್ರಹ ಹಾನಿಕರವೆಂಬುದಾಗಿ ಅನೇಕ ಚಿಕಿತ್ಸಕರ ಅಭಿಪ್ರಾಯವೆಂದು ಸಾಂಗರ್ ಹೇಳಿದ್ದು ನಿಜವಾಗಿಯೂ ಸರಿಯಲ್ಲ. ಅಮೇರಿಕೆಯ ಸಮಾಜದ ಆರೋಗ್ಯಶಾಸ್ತ್ರ ಸಮಿತಿಯ ಅನೇಕ ಚಿಕಿತ್ಸಕರೂ ವೈಜ್ಞಾನಿಕರೂ ಇಂದ್ರಿಯನಿಗ್ರಹ ಹಿತಕರವಾದುದೆಂದೆ ಅಭಿಪ್ರಾಯಪಟ್ಟದನ್ನು ನಾನು ಬಲ್ಲೆನು.

ನೀವು ನಿಜವಾಗಿಯೂ ದಿವ್ಯಕಾರ್ಯ ಮಾಡುತಿದ್ದೀರಿ ನಿಮ್ಮ ಈ ಜೀವನಾದ್ಯಂತ ಹೋರಾಟದ ಪ್ರತಿಕ್ರಿಯೆಯನ್ನು ಕುತೂಹಲದಿಂದ ನಿರೀಕ್ಷಿಸಿದೇನೆ. ಲೈಂಗಿಕ ವಿಷಯವಾಗಿ ಉಚ್ಚ ಅಧ್ಯಾತ್ಮಿಕ ದೃಷ್ಟಿಯುಳ್ಳ ಹಲವರಲ್ಲಿ ನೀವೊಬ್ಬರು. ನನ್ನ ನಿಮ್ಮಲ್ಲಿ ಅನೇಕ ಸಾಗರಗಳ ಅಂತರ ವಿದ್ದರೂ ನಾನೊಬ್ಬ ನಿಮ್ಮ ಧರ್ಮಬಂಧುವೆಂದು ನೀವು ತಿಳಿಯಬೇಕಾಗಿ ನನ್ನಿಚ್ಛೆ.

ಜಗತ್ತಿನ ಭವಿತವ್ಯ ಯುವಕರ ಕೈಯಲ್ಲಿದೆ. ಅವರು ಸತ್ಯಾಂಶ ಕಂಡುಕೊಳ್ಳಲೆಂಬ ಉದ್ದೇಶದಿಂದ ಈ ಧ್ಯೇಯ ಸಾಧನೆಯನ್ನು ನಾವಿಬ್ಬರೂ ಮುಂದುವರಿಸೋಣ.

ವಿದ್ಯಾರ್ಥಿಗಳಿಗೆ ನಾನಿತ್ತ ಉಪದೇಶದ ಅವತರಣಿಕೆ ಇಲ್ಲಿದೆ :—

ನಿರ್ಮಿಸಿ, ನಿತ್ಯವೂ ನಿರ್ಮಿಸಿ. ಈ ನಿರ್ಮಾಣಕಾರ್ಯ ಉದಾತ್ತ ವಾದುದು, ಘನವಾದುದು ಹಾಗೂ ಶ್ರೇಷ್ಠವಾದುದು. ಉತ್ಪಾದಕ ಶಕ್ತಿಯನ್ನು ಕೇವಲ ಬಾಹ್ಯಸುಖಕ್ಕಾಗಿ ನೀವು ವಿನಿಯೋಗಿಸತೊಡಗಿದರೆ ನೀವು ನಿರ್ಮಾಣಕಾರ್ಯವನ್ನು ನೋಸಗೊಳಿಸಿದಂತೆಯೆ. ಹಾಗೂ ನಿಮ್ಮಲ್ಲಿದ್ದ ಅಧ್ಯಾತ್ಮಿಕ ಬಲವನ್ನೂ ಹ್ರಾಸಗೊಳಿಸಿದಂತೆಯೆ ಸರಿ. ಅದರ ಫಲವಾಗಿ ನಿರಾಶೆ ನಮ್ಮನ್ನಪ್ಪುವುದು.

ದೈಹಿಕಸೃಷ್ಟಿ, ಬೌದ್ಧಿಕಸೃಷ್ಟಿ, ಅಧ್ಯಾತ್ಮಿಕಸೃಷ್ಟಿ ಇವೆ ನಿಜವಾದ ಆನಂದ, ಜೀವನ. ಸೃಷ್ಟಿಸುವ ಉದ್ದೇಶವಿಲ್ಲದೆ ಅಥವಾ ಆ ಗುರಿಯನ್ನು ಬೇಕೆಂತಲೆ ತಪ್ಪಿಸಿ ಕೇವಲ ಇಂದ್ರಿಯ ತೃಪ್ತಿಗಾಗಿ ಆ ಕಾರ್ಯಕ್ಕೆ ಉದ್ಯುಕ್ತರಾದರೆ ನಿಸರ್ಗವನ್ನು ವಿಕಾರಗೊಳಿಸಿದಂತಾಗುವುದು. ಮತ್ತು ನಿಮ್ಮಲ್ಲಿಯ ಅಧ್ಯಾತ್ಮಿಕ ಶಕ್ತಿಗಳನ್ನು ನಾಶಮಾಡಿದಂತಾಗುವುದು. ಇದರಿಂದ ಕಾಮಕ್ಕೆ ಕಡಿವಾಣವಿಲ್ಲದಂತಾಗಿ ನಾವು ನಿರ್ವೀರ್ಯರಾಗುವೆವು, ನಿರಾಶೆರಾಗುವೆವು, ಅಪಜಯಹೊಂದುವೆವು. ಅಲ್ಲದೆ ಉಚ್ಚ ಅಧ್ಯಾತ್ಮಿಕ ಭಾವನೆಯ ನೂತನ ಮಾನವ ಕುಲವನ್ನು ನಿರ್ಮಿಸಲು ಅವಶ್ಯವಾದ ಸೂಕ್ಷ್ಮ ಸುಂದರ ಗುಣ ಶೀಲಗಳು ಲುಪ್ತವಾಗಿ ಹೋಗುವವು

ನನ್ನ ಈ ಕೂಗು ಕಾಡಿನಲ್ಲಿಯ ಏಕಾಕಿಯಾದ ಜ್ಞಾನಿಯ ಕೂಗಿನಂತೆ ನಿಷ್ಫಲವೆಂಬುದನ್ನು ಬಲ್ಲೆ. ಆದರೆ ಇದರಲ್ಲಡಗಿದ ನಿತಾಂತ ಸತ್ಯ ನನ್ನ ಕಣ್ಣಿಗೆ ಕಾಣುತಿದೆ. ಆದುದರಿಂದ ಸತ್ಯದೆಡೆಗೆ ನಾನಾವಾಗಲೂ ಬೆರಳು ತೋರಿಸಿಯೆ ತೀರುವೆ."

ಕೃತ್ರಿಮ ಗರ್ಭಪ್ರತಿಬಂಧನೆಯನ್ನು ಖಂಡಿಸಿ ಆಗಾಗ ನನಗೆ ಅಮೇರಿಕೆಯಿಂದ ಬರುವ ಪತ್ರಗಳಲ್ಲೊಂದು ಈ ಪತ್ರ. ಅತಿ ದೂರದ ಪಾಶ್ಚಾತ್ಯ ದೇಶಗಳಿಂದ ಭರತಖಂಡವು ವಿಪುಲವಾದ ಸಾಹಿತ್ಯವನ್ನು ವಾರ ವಾರವೂ ತರಿಸುವುದು. ಇಂದ್ರಿಯನಿಗ್ರಹದ ಮೂಲಕ ದೇಹವನ್ನು ಬಂಧನದಲ್ಲಿರಿಸಿ ಪ್ರಕೃತಿದತ್ತವಾದ ಆ ಹಿರಿಯ ಸುಖಕ್ಕೆ ಅದನ್ನು ಎರವು ಮಾಡುವುದು ಮೂಢಭಾವಿಕತನವೆಂದೂ, ಆ ಮೂಢಭಾವನೆಯ ಬಂಧನದಿಂದ ಬಿಡುಗಡೆಗೊಳಿಸುವ ಕೃತ್ರಿಮ ಗರ್ಭನಿರೋಧಕೋಪಾಯಗಳನ್ನು

ಅಮೇರಿಕೆಯಲ್ಲಿ ಕೇವಲ ಹುಚ್ಚರೂ ಷಂಡರೂ ವಿರೋಧಿಸುತ್ತಾರೆಂದೂ ನಂಬಿಕೆ ಹುಟ್ಟಿಸಲು ಈ ಸಾಹಿತ್ಯ ಹವಣಿಸುತ್ತದೆ.

ಈ ಸಾಹಿತ್ಯವೂ ಸಹ ಕೃತ್ರಿಮ ಗರ್ಭನಿರೋಧಕೋಪಾಯದಂತೆ ಕ್ಷಣಮಾತ್ರ ಉನ್ಮತ್ತತೆಯನ್ನುಂಟುಮಾಡುತ್ತದೆ. ಹಾಗೂ ಅದರ ಸ್ವಾಭಾವಿಕ ಪರಿಣಾಮವನ್ನು ಲೆಕ್ಕಿಸದೆ ಅಂಥ ಕಾರ್ಯಮಾಡಲು ಪ್ರೇರಿಸುತ್ತದೆ. ಈ ಕೃತ್ರಿಮ ಉಪಾಯಗಳನ್ನು ಖಂಡಿಸಿದಾರೆಂಬ ಕಾರಣಮಾತ್ರದಿಂದಲೆ ಕೆಲ ವ್ಯಕ್ತಿಗಳ ಕಾಗದಗಳನ್ನು ನಾನು 'ಹರಿಜನ' ಓದುಗರ ಮುಂದೆ ಇಡುತ್ತಿಲ್ಲ. ಸಾಮಾನ್ಯ ಜನಕ್ಕೆ ಇದರಿಂದ ಯಾವ ಲಾಭವಿಲ್ಲದಿದ್ದರೂ ಸತ್ಯಶೋಧಕನಾದ ನನಗೆ ಅದರಿಂದ ತುಂಬಾ ಸಹಾಯವಿದೆ. ಆದರೆ ಈ ಪತ್ರ ಬರೆದವರು ಒಬ್ಬ ಉಪಾಧ್ಯಾಯರೆಂದೂ ಅವರಿಗೆ ೩೦ ವರ್ಷಗಳ ಅನುಭವವಿದೆಯೆಂದೂ ಮರೆಯಲಾಗದು ಆದುದರಿಂದ ಈ ಪತ್ರಕ್ಕೆ ಹೆಚ್ಚಿನ ಬೆಲೆಯಿದೆ. ಈ ಪ್ರಚಲಿತ ಸಾಹಿತ್ಯದ ಸೆಳವಿಗೆ ಸಿಕ್ಕ ಭರತ ಖಂಡದ ಶಿಕ್ಷಕರೂ ಹಾಗೂ ನಾಗರಿಕರಾದ ನರನಾರಿಯರೂ ಇದರಿಂದ ಪಾಠ ಕಲಿಯಬೇಕಾಗಿದೆ ವಿಸ್ಕಿಗಿಂತ ಈ ಕೃತ್ರಿಮ ಗರ್ಭನಿರೋಧದ ಉಪಯೋಗ ನಮ್ಮನ್ನು ಹೆಚ್ಚು ವಿಲೋಭನಪಡಿಸುವಂತಹದು. ಆದರೆ ಪ್ರಾಣಾಪಾಯಕರವಾದ ಮೋಹಕತ್ವದ ಮೂಲಕ ಸೆರೆಯಂತೆಯೆ ಇದಾದರೂ ಶಾಸನಸಮ್ಮತವಾಗಲಾರದು. ಇವುಗಳ ಉಪಯೋಗ ದಿನದಿನಕ್ಕೂ ಹೆಚ್ಚುತಿದೆಯೆಂದು ನಿರಾಶೆಯಲ್ಲಿ ಅವುಗಳನ್ನು ಪ್ರತಿಬಂಧಿಸುವ ಪ್ರಯತ್ನ ನಾವೆಂದಿಗೂ ಬಿಟ್ಟುಕೊಡಬಾರದು. ಕೃತ್ರಿಮೋಪಾಯಗಳ ವಿರೋಧಕರಿಗೆ ಈ ಕಾರ್ಯದಲ್ಲಿ ನಿಜವಾಗಿಯೂ ನಂಬಿಕೆಯಿದ್ದರೆ ಅವರು ಅಗತ್ಯವಾಗಿ ಅದನ್ನು ಮುಂದುವರಿಸಬೇಕು. ಕಿಕ್ಕಿರಿದ ಜನಜಂಗುಳಿಯ ಮಧ್ಯದಲ್ಲಿ ಎಬ್ಬಿಸಿದ ಆ ಲೋಕಾಂತದ ಕೂಗುಗಳಲ್ಲಿಲ್ಲದ ಒಂದು ಆವೇಶ, ಶಕ್ತಿ ಕಾಡಿನಲ್ಲಿ ಕೂಗಿದ ಈ ಏಕಾಂತದ ಕೂಗಿಗೆ ಇದೆ. ಏಕೆಂದರೆ ಈ ಕೂಗಿನ ಹಿಂದೆ ಧ್ಯಾನಬಲವಿದೆ, ವಿವೇಕದ ಫಲವಿದೆ, ಒಂದು ಅಚಲವಾದ ನಂಬಿಕೆಯ ಬೆಂಬಲವಿದೆ ಆ ಲೋಕಾಂತದ ಕೂಗಿಗೆ ಸ್ವಂತ ವಿಷಯಸುಖಾನುಭವದ ಬೆಂಬಲವೊಂದಿದೆ; ಮತ್ತು ಬೇಡವಾದ ಮಕ್ಕಳ ಬಗ್ಗೆ ಅವುಗಳ ತಾಯಂದಿರ ಕಷ್ಟಗಳಬಗ್ಗೆ ಉಂಟಾಗುವ ಭಾವನಾತ್ಮಕ ನಿರರ್ಥಕ ಮರುಕದ ಬೆಂಬಲವು ಇನ್ನೊಂದು. ಇವೆರಡರ ಹೊರತು ಬೇರಾವ

ಬೆಂಬಲವೂ ಇಲ್ಲ. ಸ್ವಂತ ವಿಷಯಸುಖಾನುಭವದ ದೃಷ್ಟಿಯಿಂದ ವಾದಿಸುವುದೆಂದರೆ ಕುಡುಕ ತನ್ನ ಸೆರೆಯಪರವಾಗಿ ವಾದಿಸಿದಂತೆ. ಮರುಕ, ದಯೆ ಎಂದು ಹೇಳುವ ಅವರ ಯುಕ್ತಿ ನಿಜವಾಗಿ ಒಂದು ಮಾಯಜಾಲ ಮಾತ್ರ. ಬೇಡವಾದ ಮಕ್ಕಳಿಂದಾಗುವ ಬವಣೆ ಅಥವಾ ಬೇಡವಾದ ತಾಯಿತನದಿಂದಾಗುವ ಕಷ್ಟನಷ್ಟಗಳೆಂದರೆ ಕಲ್ಯಾಣೇಚ್ಛುವಾದ ನಿಸರ್ಗವು ನಮಗೆ ಕೊಡುವ ಎಚ್ಚರಿಕೆ ಇಲ್ಲವೆ ಶಿಕ್ಷೆಗಳಿದ್ದಂತೆ. ಶರೀರಯಮ, ಆತ್ಮಸಂಯಮ ಮುಂತಾದ ನಿಸರ್ಗ ನಿಯಮಗಳನ್ನು ಮೀರುವುದೆಂದರೆ ಆತ್ಮಹತ್ಯೆಯೆ ಸರಿ. ನಮ್ಮದು ಈಗ ಪರೀಕ್ಷೆಯಕಾಲ. ನಾವು ಯಮಸಂಯಮಗಳ ಬ್ರಹ್ಮಚರ್ಯವನ್ನು ದುರ್ಲಕ್ಷಿಸಿದರೆ ಹೋರಾಟಕ್ಕೆ ಹೆದರಿ ಓಡಿಹೋಗುವ ಹೇಡಿಗಳಂತೆ ಜೀವನದ ಏಕಮಾತ್ರ ಆನಂದಕ್ಕೆ ಎರವಾಗಿ ಬಾಳುವೆಯಲ್ಲಿ ಸೋಲನ್ನು ನಾವೆ ತಂದುಕೊಳ್ಳುವೆವು.

---

# "ವಿದ್ಯಾರ್ಥಿಗಳಿಗೆ ನಾಚಿಕೆಗೇಡು"

---

[ಆಧುನಿಕ ಹುಡುಗಿ ನಾಲ್ಕಾರು ಮನ್ಮಥರಿಗೆ ರತಿದೇವಿಯಾಗಲು ತುಂಬ ಇಷ್ಟಪಡುವಳು. ಸಾಹಸವೆಂದರೆ ಅವಳಿಗೆ ಹಿಗ್ಗು......ಅವಳು ಉಡು-ತೊಡುವುದು ಗಾಳಿ, ಮಳೆ-ಬಿಸಿಲಿನಿಂದ ರಕ್ಷಿಸಿಕೊಳ್ಳುವುದಕ್ಕಲ್ಲ; ಪರರ ನೋಟ ಸೆಳೆವುದಕ್ಕೆ. ಮುಖಕ್ಕೆ ಬಂಣ ಬಳೆದುಕೊಂಡು ನಿಸರ್ಗವು ತನಗಿತ್ತ ಸೌಂದರ್ಯಕ್ಕೆ ಹೆಚ್ಚಿನ ಮೆರುಗು ಕೊಡಬಯಸಿ ವಿಚಿತ್ರಳಾಗಿ ತೋರುತ್ತಾಳೆ. ಅಹಿಂಸಾ ಮಾರ್ಗ ಇಂಥ ಹುಡುಗಿಯರಿಗಾಗಿ ಅಲ್ಲವೆ ಅಲ್ಲ.]

ಪಂಜಾಬಿನ ಕಾಲೇಜು ವಿದ್ಯಾರ್ಥಿನಿಯೊಬ್ಬಳ ಕನಿಕರದ ಪತ್ರವೊಂದು ಈಗೆರಡು ತಿಂಗಳಿಂದ ನನ್ನ ಪತ್ರಸಂಗ್ರಹದಲ್ಲಿ ಒರಗಿದೆ. ಈ ಹುಡುಗಿಯ ಪತ್ರಕ್ಕೆ ಉತ್ತರ ಬರೆಯುವುದನ್ನು ಹಿಂದೂಡಿದುದಕ್ಕೆ 'ಸಮಯದ ಅಭಾವ' ಒಂದು ನೆಪ ಮಾತ್ರ. ಆ ಪತ್ರಕ್ಕೆ ತಕ್ಕ ಉತ್ತರ ನಾ ಬಲ್ಲೆನಾದರೂ ಒಂದಿಲ್ಲೊಂದು ಕಾರಣದಿಂದ ಆ ಕಾರ್ಯ ಮುಂದೂಡುತ್ತಲಿ ಇದ್ದೆ. ಅಷ್ಟರಲ್ಲಿ ಈ ವಿಷಯದಲ್ಲಿ ತುಂಬ ಅನುಭವಪಡೆದ ಮತ್ತೊಬ್ಬ

ತಂಗಿಯ ಓಲೆಯೊಂದು ಬಂದಿತು. ಆದುದರಿಂದ ಕಾಲೇಜು ವಿದ್ಯಾರ್ಥಿನಿಯರಿಗೆ ಸಂಬಂಧಿಸಿದ ನಿಜವಾದ ಸಂಕಟಗಳ ಪರಿಹಾರದ ವಿಷಯವಾಗಿ ನಾನು ಬೇಗನೆ ಚರ್ಚಿಸಬೇಕಲ್ಲದೆ, ವ್ಯರ್ಥ ಕಾಲವಿಳಂಬಮಾಡುವುದು ಸರಿಯಲ್ಲವೆಂದೆನಿಸಿತು. ಈ ಹುಡುಗಿ ತನ್ನ ಪತ್ರವನ್ನು ಶುದ್ಧ ಹಿಂದುಸ್ತಾನಿಯಲ್ಲಿ ಬರೆದಿದ್ದಾಳೆ. ಆ ಪತ್ರ ಓದಿದ ನನಗೆ ಅವಳ ಆಂತರಿಕ ಯಾತನೆಯು ಚಿತ್ರ ಕಣ್ಣಿಗೆ ಕಟ್ಟಿದಂತಾಗಿದೆ. ಆದುದರಿಂದ ಈ ಪತ್ರಕ್ಕೆ ಸಾಧ್ಯವಾದಷ್ಟು ನ್ಯಾಯ ನನ್ನಿಂದ ದೊರಕುವಂತೆ ನಾನು ಪ್ರಯತ್ನಿಸಲೇ ಬೇಕು. ಅವಳ ಓಲೆಯ ಕೆಲಭಾಗದ ಅನುವಾದ ಹೀಗಿದೆ:—

"ಹುಡುಗಿಯರಿಗೂ ಪ್ರೌಢಸ್ತ್ರೀಯರಿಗೂ ಊರಿಂದೂರಿಗೆ ಇಲ್ಲವೆ ದೊಡ್ಡ ಊರಿನಲ್ಲಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಒಂಟಿಗರಾಗಿ ಹೋಗುವ ಅನಿವಾರ್ಯ ಪ್ರಸಂಗಗಳು ಎಷ್ಟೋ ಬಾರಿ ಒದಗಿಬರುತ್ತವೆ. ಆಗ ಕ್ಷುಲ್ಲಕ ಜನರು ಒಂಟಿಗರಾಗಿ ಹೋಗುತ್ತಿದ್ದ ಅಂತಹರನ್ನು ಕಂಡರೆ ಸರಿ, ಅವರನ್ನು ಪೀಡಿಸಲು ಪ್ರಾರಂಭಿಸುತ್ತಾರೆ. ಹತ್ತಿರ ಹಾಯ್ದು ಹೋಗುವಾಗ ಅಸಹ್ಯವಾದ ಅದೇಕೆ ಅವಾಚ್ಯವೂ ಆದ ಮಾತುಗಳನ್ನು ಆಡುತ್ತಾರೆ. ಭಯ ಅವರನ್ನು ಹಿಮ್ಮೆಟ್ಟಿಸದಿದ್ದರೆ ಆ ಸಂದರ್ಭದ ಪೂರ್ಣಲಾಭ ಪಡೆಯಲು ಹಿಂದುಮುಂದೆ ನೋಡುವುದಿಲ್ಲ. ಇಂಥ ಪ್ರಸಂಗಗಳಲ್ಲಿ ಅಹಿಂಸಾತತ್ವ ಹೇಗೆ ಉಪಯೋಗಿಸಬೇಕೆಂಬುದನ್ನು ತಿಳಿಯಲಿಚ್ಛಿಸುವೆ. ಹಿಂಸೆಯ ಉಪಯೋಗವನ್ನಂತೂ ನಾವು ಬಲ್ಲೆವು. ಹುಡುಗೆಗೆ ಅಥವಾ ಪ್ರೌಢ ಸ್ತ್ರೀಗೆ ನಸುಧೈರ್ಯವಿದ್ದಲ್ಲಿ ಕೈಯಲ್ಲಿಯ ಸಾಧನವನ್ನುಪಯೋಗಿಸಿ ಕಿಡಿಗೇಡಿಗೆ ತಕ್ಕ ಪಾಠ ಕಲಿಸಬಲ್ಲಳು. ಕೊನೆಯಮುಟ್ಟಿಗೆ ಜನ ಜಾತ್ರೆ ಸೇರುವಂತೆ ಗಲಭೆಯೆಬ್ಬಿಸಿ ಆ ಕೇಡಿಯನ್ನು ಕಕ್ಕಾವಿಕ್ಕಿಯನ್ನಾಗಿಸಿ ಕಾಲಿಗೆ ಬುದ್ಧಿಹೇಳಿಸುವಂತೆಯಾದರೂ ಮಾಡಿಸಬಹುದು. ಆದರೆ ಇದರಿಂದ ರೋಗ ಕೆಲದಿನಗಳಮುಟ್ಟಿಗೆ ಗುಣಹೊಂದೀತೆ ಹೊರತು ಅದರ ಮೂಲೋತ್ಪಾಟನೆಯಾಗಲಾರದು. ಈ ಕಿಡಿಗೇಡಿ ಜನರ ಪರಿಚಯ ನಮಗಿದ್ದುದಾದರೆ ಪ್ರೇಮದಿಂದ ನಮ್ರತೆಯಿಂದ ವಾದಿಸಿ ನಮ್ಮ ಮಾತು ಕೇಳಿಕೊಳ್ಳುವಂತೆ ಮಾಡಬಹುದು. ಆದರೆ ಜೊತೆಯಲ್ಲಿ ಗಂಡಸರಿಲ್ಲದೆ ಏಕಾಂಗಿನಿಯಾಗಿ ಹೋಗುವ ಹುಡುಗಿ ಅಥವಾ ಹೆಂಣುಮಕ್ಕಳನ್ನು ನೋಡಿ ಕಾಲ್ಚಕ್ರ ಸವಾರನೊಬ್ಬ (Cyclist) ಅವಾಚ್ಯ ನುಡಿಗಳನ್ನಾಡತೊಡಗಿದ

ರೇನು ಗತಿ ? ಅವನೊಂದಿಗೆ ವಾದಿಸೋಣವೆಂದರೆ ಅದೂ ಅಸಂಭವ. ಪುನಃ ಅವನ ಭೆಟ್ಟಿ ಒದಗುವ ಸಂಭವವೂ ಇಲ್ಲ. ಒದಗಿದರೂ ಆಗ ಗುರುತು ಸಿಕ್ಕದೆ ಹೋಗಬಹುದು. ಅವನ ವಿಳಾಸವೂ ಗೊತ್ತೇ ಇರುವುದಿಲ್ಲ. ಇಂಥ ಪ್ರಸಂಗಗಳಲ್ಲಿ ಪಾಪ ಆ ಹುಡುಗೆಯರಾಗಲಿ, ಹೆಂಣುಮಗಳಾಗಲಿ ಏನು ಮಾಡಬಲ್ಲಳು ? ನಿಮಗೆ ಚೆನ್ನಾಗಿ ಮನದಟ್ಟಿಸಿಕೊಡಲು ಅಕ್ಟೋಬರ್ ೨೭ನೆಯ ರಾತ್ರಿಯಲ್ಲಿ ನನಗಾದ ಅನುಭವವನ್ನೆ ನಿಮಗೆ ವಿವರಿಸುವೆ. ಅಂದು ಬೈಗಿನ ೭-೩೦ ಗಂಟೆಗೆ ಒಂದು ಅಗತ್ಯದ ಕಾರ್ಯಕ್ಕಾಗಿ ನಾನು ನನ್ನ ಗೆಳತಿಯೊಂದಿಗೆ ಒಂದೆಡೆ ಹೊರಟಿದ್ದೆ. ಆಗ ಸಂಗಡ ಕರೆದುಕೊಂಡು ಹೋಗಲು ಪರಿಚಿತ ಗಂಡಸರಾರೂ ಇರಲಿಲ್ಲ. ಇತ್ತ ಕಾರ್ಯವನ್ನೂ ಅಸಡ್ಡೆಮಾಡುವಂತಿರಲಿಲ್ಲ ನಡುದಾರಿಯಲ್ಲಿ ಕಾಲ್ಚಕ್ರ ಸವಾರಿಯಾದ ಸೀಖಯುವಕನೊಬ್ಬ ನಮ್ಮ ಸನಿಹದಿಂದಲೆ ಹಾಯ್ದು ನಮ್ಮ ಕಿವಿಗೆ ಬೀಳುವಂತೆ ಏನೇನೊ ಒಟಗುಟ್ಟುತ್ತಾ ಸಾಗಿದ. ನಮ್ಮ ಮೇಲೆಯೆ ಅವನ ಪ್ರಯೋಗವೆಂದು ನಾವರಿತೆವು. ನಮಗೆ ಕಸಿವಿಸಿಯಾಯಿತು, ಮೈಯುರಿಯತೊಡಗಿತು. ಆಗ ಬೀದಿಯಲ್ಲಿ ಜನಸಂದಣಿಯೂ ಇರಲಿಲ್ಲ. ನಾವು ಕೆಲ ಹೆಜ್ಜೆ ಮುಂದುವರಿಯುವಷ್ಟರಲ್ಲಿಯೆ ಆ ಸವಾರಿ ಮರಳಿ ಬಂದ. ಆತ ದೂರದಲ್ಲಿದ್ದರೂ ನಾವು ಆತನನ್ನು ಕೂಡಲೆ ಗುರುತಿಸಿದೆವು. ನಮ್ಮ ಹತ್ತಿರದಲ್ಲಿಯೆ ಇಳಿಯುವ ಇಚ್ಛೆಯಿಂದಲೊ ಅಥವಾ ಸನಿಹದಿಂದ ಹಾಯ್ದು ಹೋಗುವ ಇಚ್ಛೆಯಿಂದಲೊ—ದೇವರೆ ಬಲ್ಲ—ಆತ ನೇರವಾಗಿ ನಮ್ಮೆಡೆಗೆ ಚಕ್ರ ಹೊರಳಿಸಿದ. ಸಂಕಟದಲ್ಲಿ ಸಿಗಿಬಿದ್ದೆವೆಂಬ ಭಾವನೆಯುಂಟಾ ಯಿತು. ನಮ್ಮ ಶಾರೀರಕ ಬಲವನ್ನು ನಾವು ನೆಚ್ಚಿಕೊಳ್ಳುವಹಾಗಿರಲಿಲ್ಲ. ನಾನಂತೂ ಸಾಮಾನ್ಯ ಹುಡುಗೆಗಿಂತಲೂ ನಿಶ್ಶಕ್ತಳು. ಆದರೆ ನನ್ನ ಕೈಯಲ್ಲಿ ಹೆಬ್ಬೊತ್ತಗೆಯೊಂದಿತ್ತು. ಹೇಗೆಯೊ ಏನೊ ಒಮ್ಮೆಲೆ ನನ್ನಲ್ಲಿ ಧೈರ್ಯಮೂಡಿತು. ಭಾರವಾದ ಆ ಪುಸ್ತಕವನ್ನು ಅವನಿಗೆ ಗುರಿಯಿಟ್ಟು ಬಿಮ್ಮನೆ ಬೀಸಿ ಒಗೆದು “ ಕಿಡಿಗೇಡಿತನ ಮಾಡಲು ಇನ್ನೊಮ್ಮೆ ಧೈರ್ಯ ಮಾಡುವೆಯಾ ?'' ಎಂದು ಆರ್ಭಟಿಸಿದೆ. ಆತ ಅತಿಪ್ರಯಾಸದಿಂದ ಚಕ್ರದ ಜೋಲಿಹಿಡಿದು ವೇಗಹೆಚ್ಚಿಸಿ ಅಲ್ಲಿಂದ ಕಂಬಿ ಕಿತ್ತಿದ. ನಾನು ಆತನೆಡೆಗೆ ಪುಸ್ತಕ ಬೀಸಿ ಒಗೆಯದೆಹೋಗಿದ್ದರೆ ದಾರಿಯುದ್ದಕ್ಕೂ ಅಸಹ್ಯ ನುಡಿಗಳಿಂದ ಆತ ನಮ್ಮನ್ನು ಗಾಸಿಗಾಸಿ ಮಾಡುತಿದ್ದ. ಆದರೆ ಇದು

ಸರ್ವಸಾಮಾನ್ಯ ಘಟನೆ. ಅದೇಕೆ, ಘಟನೆಯೆ ಅಲ್ಲವೆನ್ನುವಷ್ಟು ಸಾಮಾನ್ಯ ಸಂಗತಿ. ನೀವು ಲಾಹೋರಿಗೆ ಬಂದು ದುರ್ದೈವಿ ಹುಡುಗೆಯರಾದ ನಮ್ಮ ಸಂಕಟ ಕೇಳಿಕೊಳ್ಳಬೇಕೆಂದು ನಮ್ಮ ಆಶಯ. ನೀವು ಇಲ್ಲಿ ಬಂದರೆ ಯಾವುದಾದರೊಂದು ಮಾರ್ಗ ತೋರಿಸಬಹುದು. ಮೊದಲನೆಯದಾಗಿ ಮೇಲೆ ವಿವರಿಸಿದಂತಹ ಪ್ರಸಂಗಗಳಲ್ಲಿ ಹುಡುಗೆಯರು ಅಹಿಂಸಾ ತತ್ವವನ್ನು ಹೇಗೆ ಅನುಸರಿಸಬೇಕು ಮತ್ತು ಅದರಿಂದ ಹೇಗೆ ರಕ್ಷಣೆ ಪಡೆಯಬೇಕು ಎಂಬುದನ್ನು ತಿಳಿಸಿರಿ. ಎರಡನೆಯದಾಗಿ ಸ್ತ್ರೀಯರ ಅಪಮಾನವನ್ನು ಮಾಡುವ ಹುಡುಗರ ಕುತ್ಸಿತ ಬುದ್ಧಿಯನ್ನು ತಿದ್ದಲು ಯಾವ ಉಪಾಯ ತೋರುವಿರಿ? ಹೆಂಣುಮಕ್ಕಳೊಡನೆ ಸಭ್ಯರೀತಿಯಿಂದ ನಡೆಯಲು ಚಿಕ್ಕಂದಿನಿಂದಲೆ ಕಲಿತ ಮಾನವಕುಲ ಹುಟ್ಟಿಬರುವ ವರೆಗೆ ಆ ತೊಂದರೆಗಳನ್ನು ಸಹಿಸಿಕೊಂಡಿರೆಂದು ನೀವು ಹೇಳುವುದಿಲ್ಲವಷ್ಟೆ? ಈ ಸಾಮಾಜಿಕ ಕೇಡನ್ನು ಕಿತ್ತೊಗೆಯಲು ಸರಕಾರಕ್ಕೆ ಮನಸ್ಸೂ ಇಲ್ಲ ಅಥವಾ ಅದಕ್ಕೆ ಶಕ್ತಿಯೂ ಇರಲಿಕ್ಕಿಲ್ಲ. ಹಿರಿ ನಾಯಕರಿಗೆ ಇಂಥ ಸಮಸ್ಯೆಗಳ ವಿಚಾರಮಾಡಲು ಬಿಡುವು ಇಲ್ಲ. ಎಲ್ಲಿಯಾದರೂ ಕಿಡಿಗೇಡಿಯನ್ನು ಧೈರ್ಯವಾಗಿ ಎದುರಿಸಿ ಬೆಪ್ಪುಮಾಡಿದ ಹುಡುಗೆಯ ವಿಷಯವನ್ನು ಕೇಳಿದ ಕೆಲವರು "ಭಾಪು ಭಾಪು; ಹುಡುಗೆಯರೆಲ್ಲರೂ ಹೀಗೆಯೆ ಮಾಡಬೇಕು" ಎಂದು ಹೊಗಳುತ್ತಾರೆ. ಕೆಲಸಲ ನಾಯಕರು ವಿದ್ಯಾರ್ಥಿಗಳ ದುರ್ನಡತೆಯ ವಿಷಯವಾಗಿ ಭಾಷಣವೀಯುವಾಗ ಕೇವಲ ಮಾತಿನ ಮಳೆಯನ್ನೆ ಕರೆಯುತ್ತಾರೆ. ಆದರೆ ಈ ಗಡಚು ಸಮಸ್ಯೆಯ ನಿವಾರಣೆಗೋಸುಗ ಟೊಂಕ ಕಟ್ಟಿ ನಿಲ್ಲುವರಾರೂ ಇಲ್ಲ. ದೀಪಾವಳಿಯಂಥ ಹಬ್ಬಗಳಲ್ಲಿ "ದೀಪೋತ್ಸವದ ಮೋಜು ನೋಡಲು ಮನೆಯಿಂದ ಹೊರಗೆ ಬರುವ ಹೆಂಣುಮಕ್ಕಳೆ ಎಚ್ಚರ!" ಎಂದು ಪತ್ರಿಕೆಗಳಲ್ಲಿ ಎಚ್ಚರಿಕೆಯ ಪ್ರಕಟನೆ ಕೊಡುವ ವಿಷಯ ತಿಳಿದು ನೀವು ಸಖೇದಾಶ್ಚರ್ಯಪಡಬಹುದು. ಈ ಭಾಗದ ನಾರಿಯರಾದ ನಾವು ಎಂಥ ಪರಿಸ್ಥಿತಿಯಲ್ಲಿದೇವೆಂಬುದಕ್ಕೆ ಈ ಸಂಗತಿಯೊಂದೆ ಸಾಕಷ್ಟು ಬೆಳಕು ಕೊಡುತ್ತದೆ. ಓದುಗರಾಗಲಿ ಲೇಖಕರಾಗಲಿ ಇಂಥ ಪ್ರಕಟನೆ ಕೊಡಬೇಕಾಗುತ್ತದೆಂಬ ವಿಷಯವಾಗಿ ಎಳ್ಳಷ್ಟೂ ನಾಚಿಕೆಪಡುವುದಿಲ್ಲ."

ನಾನು ಈ ಪತ್ರವನ್ನು ಇನ್ನೊಬ್ಬ ಪಂಜಾಬಿ ಹುಡುಗಿಗೆ ಓದಲು ಕೊಟ್ಟೆ. ತನ್ನ ಕಾಲೇಜು ದಿನಗಳ ಅನುಭವದಿಂದ ಅವಳೂ ಈ ಘಟನೆಯನ್ನು ಸಮರ್ಥಿಸಿದಳು. ಅಲ್ಲದೆ ಈ ಪಂಜಾಬಿ ಹುಡುಗಿಯ ಅನುಭವ ಈ ಭಾಗದ ಹುಡುಗಿಯರ ಸರ್ವಸಾಮಾನ್ಯ-ಅನುಭವವೆಂದೂ ಹೇಳಿದಳು.

ಮತ್ತೊಬ್ಬ ಅನುಭವಿಕ ಸ್ತ್ರೀಯು ಲಖನೌದಲ್ಲಿಯ ತನ್ನ ಗೆಳತಿಯ ಅನುಭವದ ವಿಷಯವಾಗಿ ಬರೆದುದೆ ನನಗೆ ಬಂದ ಎರಡನೆಯ ಪತ್ರ. ಚಲಚ್ಚಿತ್ರಗೃಹದಲ್ಲಿ ಹುಡುಗಿಯರ ಹಿಂದಣ ಸಾಲಿನಲ್ಲಿ ಕುಳಿತ ಹುಡುಗರು ಅಸಹ್ಯ ಹೇಸಿ ನುಡಿಗಳನ್ನಾಡುತ್ತ ಹುಡುಗಿಯರನ್ನು ತೊಂದರೆಗೀಡು ಮಾಡುತ್ತಾರೆ. ಅಲ್ಲದೆ ಹುಡುಗರ ಚೇಷ್ಟೆ, ನುಡಿಯಲ್ಲಿ ಮಾತ್ರವಲ್ಲದೆ ಕ್ರಿಯಾರೂಪದಲ್ಲೂ ನಡೆಯುತ್ತಿವೆಯೆಂದೂ ಅವುಗಳನ್ನು ವಿವರಿಸಿ ಬರೆದಿದಾಳೆ. ಅದನ್ನು ನಾನಿಲ್ಲಿ ಉದ್ಧರಿಸುವುದು ಅನುಚಿತ.

'ಮೈಮೇಲೊದಗಿದ ಸಂಕಟಕ್ಕೆ ತಾತ್ಕಾಲಿಕ ಪರಿಹಾರ'ದ ಪ್ರಶ್ನೆ ಮಾತ್ರವಿದ್ದರೆ ಪಂಜಾಬಿನ ನಿರ್ಬಲ-ಹುಡುಗಿಯ ಉಪಾಯ—ಎಂದರೆ ಕಾಲ್ಚಕ್ರ ಸವಾರಿಯಮೇಲೆ ಪುಸ್ತಕ ಬೀಸಿ ಒಗೆದ ಉಪಾಯ ನಿಜವಾಗಿಯೂ ಸದುಪಾಯವೆಂದು ನಿಸ್ಸಂದೇಹವಾಗಿ ಹೇಳಬಹುದು. ಪ್ರಾಚೀನಕಾಲದಿಂದಲೂ ವಾಡಿಕೆಯಲ್ಲಿದ್ದ ಉಪಾಯವಿದು. ಮನುಷ್ಯ ಹಿಂಸಾಚಾರಿಯಾಗಲಿಚ್ಛಿಸಿದರೆ ಬಲಿಷ್ಠ ವೈರಿಯಮೇಲೆ ಹಿಂಸೆ ಉಪಯೋಗಿಸಲು ಶಾರೀರಿಕ ದುರ್ಬಲತೆ ಅವನನ್ನು ಅಡ್ಡಯಿಸಲಾರದೆಂದು ಈ ಪತ್ರಿಕೆಯಲ್ಲಿ ಎಷ್ಟೋ ಬಾರಿ ಬರೆದಿದೇನೆ. ಮೇಲಾಗಿ ಈಗಿನ ಯುಗದಲ್ಲಿ ದೈಹಿಕಬಲವನ್ನು ಉಪಯೋಗಿಸುವ ನಾನಾ ಶೋಧನೆಗಳಾಗಿದ್ದು ಚಿಕ್ಕಬಾಲಿಕೆಯೂ ಅದರ ಸಾಮಾನ್ಯ ಜ್ಞಾನದಿಂದ ಸಾವುನೋವಿನ ಪ್ರಸಂಗಗಳನ್ನು ಎದುರಿಸ ಬಲ್ಲಳು. ಪತ್ರಲೇಖಿಕೆಯು ವಿವರಿಸಿದ ಪ್ರಸಂಗಗಳಲ್ಲಿ ಹುಡುಗಿಯರು ಆತ್ಮರಕ್ಷಣೆ ಮಾಡಿಕೊಳ್ಳಲು ಹಿಂಸಾತ್ಮಕ ಶಿಕ್ಷಣ ಕೊಡುವುದು ಇತ್ತೀಚೆ ಲೋಕರೂಢಿಯಾಗಿದೆ. ತನ್ನ ಕೈಲಿದ್ದ ಸ್ವರಕ್ಷಣೆಯ ಅಸ್ತ್ರವನ್ನು ತತ್ಕಾಲ ಲಾಭಕರವಾಗಿ ಮಾಡಿಕೊಂಡರೂ ದಿನದಿನಕ್ಕೆ ಬೆಳೆಯುತ್ತಿರುವ ಈ ಕೇಡಿಗೆ ಅದುವೆ ಸದುಪಾಯವಲ್ಲವೆಂದು ತಿಳಿದುಕೊಳ್ಳುವಷ್ಟು ಜಾಣ್ಮೆಯಿದೆ ನಮ್ಮ ಪತ್ರಲೇಖಿಕೆಗೆ. ನಾನು ಹೇಳುವುದಿಷ್ಟೆ—ಹೇಸಿ ಕೀಳುನುಡಿಗಳನ್ನು ಕೇಳಿ ಚಿಂತಾಕ್ರಾಂತರಾಗಬೇಡಿರಿ. ಎಂದರೆ ಅಪಮಾನಗಳನ್ನು ನುಂಗಿ ಸ್ವಸ್ಥ

ವಾಗಿ ಕುಳಿತುಕೊಳ್ಳಿ ಎಂಬರ್ಥವಲ್ಲ. ಇಂತಹ ಎಲ್ಲ ಸಂಗತಿಗಳನ್ನು ಪತ್ರಿಕೆಯಲ್ಲಿ ಅಚ್ಚುಹಾಕಿಸಬೇಕು. ಅಪರಾಧಿಗಳ ಹೆಸರು ತಿಳಿದಕೂಡಲೆ ಅವರ ಹೆಸರುಗಳನ್ನು ಪ್ರಸಿದ್ಧಿಸಬೇಕು. ಇಂಥ ಅನಿಷ್ಟಗಳನ್ನು ಬೆಳಕಿಗೆ ತರುವಲ್ಲಿ ಸುಳ್ಳು ಸಭ್ಯಾಚಾರದ ಸೋಗು ಕೂಡದು. ಸಮಾಜಕ್ಕೆ ದ್ರೋಹ ಬಗೆಯುವ ದುರ್ವ್ಯವಹಾರಿಗಳನ್ನು ತಿದ್ದುವ ಬಗೆಗೆ ಲೋಕಮತದಂತಹ ದಿವ್ಯೌಷಧಿ ಬೇರೊಂದಿಲ್ಲ ಇಂಥ ವಿಷಯಗಳ ಬಗೆಗೆ ಜನತೆಯೂ ಉದಾಸೀನ ಭಾವನೆ ತಳೆದಿದೆಯೆಂದು ಲೇಖಿಕೆಯು ದೂರಿದಾಳೆ. ಆದರೆ ಜನತೆ ಮಾತ್ರವೆ ದೋಷಾರ್ಹವಲ್ಲ ಅಲ್ಲಲ್ಲಿ ಘಟಿಸಿದ ದುರ್ನಡತೆಯ ದೃಷ್ಟಾಂತಗಳು ಜನರಿಗೆ ತಿಳಿಯುವಂತಾಗಬೇಕು. ಕಳವಿನ ವಿಷಯವಾಗಿ ಪತ್ರಿಕೆಗಳಲ್ಲಿ ಪ್ರಕಾಶಗೊಳಿಸಿ ಪ್ರಚಾರಮಾಡದೆಹೋದರೆ ಅದರ ನಿವಾರಣೆ ಹೇಗೆ ಅಸಾಧ್ಯವೊ ಹಾಗೆಯೆ ದುರ್ನಡತೆಯ ಸಂಗತಿಗಳನ್ನು ಹತ್ತಿಕ್ಕಿ ಕೊಂಡರೆ ಅವುಗಳ ಬಗ್ಗೆ ನಿವಾರಣೋಪಾಯ ಕೈಗೊಳ್ಳುವುದೂ ಅಸಾಧ್ಯವೆ ಸರಿ. ದುರ್ಗುಣ ಹಾಗೂ ದುಷ್ಕೃತ್ಯಗಳನ್ನು ಮುಚ್ಚಲು ಕತ್ತಲೆ ಬೇಕು. ಅವುಗಳ ಮೇಲೆ ಬೆಳಕು ಚೆಲ್ಲಿದಲ್ಲಿ ಅವು ಮಾಯವಾಗುವವು.

ಆದರೆ ಆಧುನಿಕ ಹುಡುಗಿ ನಾಲ್ಕಾರು ಮನ್ಮಥರಿಗೆ ರತಿದೇವಿಯಾಗಲು ತುಂಬ ಇಷ್ಟಪಡುವಳು. ಸಾಹಸವೆಂದರೆ ಅವಳಿಗೆ ಹಿಗ್ಗು. ಆದರೆ ನಮ್ಮ ಲೇಖಿಕೆ ಆ ಗುಂಪಿಗೆ ಸೇರಿದವಳಲ್ಲ. ಅವಳು ಉಡುತೊಡುವುದು ಗಾಳಿ, ಮಳೆ ಬಿಸಿಲಿನಿಂದ ರಕ್ಷಿಸಿಕೊಳ್ಳುವುದಕ್ಕಲ್ಲ; ಪರರ ನೋಟ ಸೆಳೆವುದಕ್ಕೆ. ಮುಖಕ್ಕೆ ಬಂಣ ಬಳೆದುಕೊಂಡು ನಿಸರ್ಗವು ತನಗಿತ್ತ ಸೌಂದರ್ಯಕ್ಕೆ ಹೆಚ್ಚಿನ ಮೆರುಗು ಕೊಡಬಯಸಿ ವಿಚಿತ್ರಳಾಗಿ ತೋರುತ್ತಾಳೆ. ಅಹಿಂಸಾ ಮಾರ್ಗ ಇಂಥ ಹುಡುಗೆಯರಿಗಾಗಿ ಅಲ್ಲವೆ ಅಲ್ಲ. ನಮ್ಮಲ್ಲಿ ಹುದುಗಿದ ಅಹಿಂಸಾ ಶಕ್ತಿಯ ವಿಕಾಸಕ್ಕೆ ಕೆಲವೊಂದು ವಿಶಿಷ್ಟ ನಿಯಮಗಳು ಅವಶ್ಯ ವೆಂದು ಈಗಾಗಲೆ ಈ ಪತ್ರಿಕೆಯಲ್ಲಿ ಸಾಕಷ್ಟು ಸಲ ಬರೆದಿದೇನೆ. ಆ ಶಕ್ತಿ ಒಂದು ಮಹಾಪ್ರಯತ್ನವೆ ಸರಿ. ಅದು ನಮ್ಮ ಜೀವನದ ಆಚಾರವಿಚಾರ ಗಳಲ್ಲಿ ಕ್ರಾಂತಿಯನ್ನೆ ಮಾಡುವುದು. ನಮ್ಮ ಪತ್ರಲೇಖಿಕೆ ಹಾಗೂ ಅವಳ ವಿಚಾರವನ್ನೊಪ್ಪುವ ಹುಡುಗೆಯರು ನನ್ನ ಸೂಚನೆಯಂತೆ ತಮ್ಮ ಜೀವನ ಮಾರ್ಪಡಿಸಿಕೊಂಡರೆ ಅವರ ಸಂಪರ್ಕದಲ್ಲಿ ಬರುವ ಹುಡುಗರು ಅವರನ್ನು ಗೌರವವಾಗಿ ಕಾಣುವದಲ್ಲದೆ ಅವರೆದುರಿನಲ್ಲಿ ಸಭ್ಯರೀತಿಯಲ್ಲಿ ವರ್ತಿಸುವ

ರೆಂಬುದನ್ನೂ ಅವರು ಕಂಡುಕೊಳ್ಳಬಹುದು. ಆದರೆ ಪ್ರಸಂಗವಶಾತ್ ಅವರ ಮಾನಭಂಗವಾಗುವ ಸಂದರ್ಭವೊದಗಿದಲ್ಲಿ—ಕೆಲಸಲ ಒದಗುವ ಸಂಭವವುಂಟು—ಆಗ ಗಂಡಸಿನ ಪಶುತ್ವಕ್ಕೆ ಬಲಿಯಾಗುವುದಕ್ಕಿಂತ ಸಾವನ್ನಪ್ಪುವಂತಹ ಕೆಚ್ಚೆದೆಯ ಗುಣಗಳನ್ನು ಬೆಳೆಸಿಕೊಳ್ಳುವುದು ಅಗತ್ಯ. 'ಮಿಸುಗಲೂ ಬಾರದಂತೆ ಭದ್ರವಾಗಿ ಬಂಧಿಸಲ್ಪಟ್ಟ ಹುಡುಗಿ ನೀವು ತಿಳಿದಷ್ಟು ಬೇಗನೆ ಸಾವನ್ನು ತಂದುಕೊಳ್ಳಲಾರ'ಳೆಂದು ನನಗೆ ಹಲವರು ಸೂಚನೆಯಿತ್ತಿದಾರೆ. ಆದರೆ ಪ್ರತಿಕಾರಮಾಡಬಲ್ಲ ದೃಢಸಂಕಲ್ಪದ ಸ್ತ್ರೀಯು ಮಿಸುಕಲೂ ಬಾರದಂತೆ ಬಂಧಿಸಿದ ಕಟ್ಟುಗಳನ್ನೆಲ್ಲವನ್ನೂ ಹರಿದೊಗೆಯಬಲ್ಲಳೆಂದು ಹೇಳುವ ಸಾಹಸ ಮಾಡುತಿದ್ದೇನೆ. ಅವಳ ಮನದ ದೃಢತೆ ಆಕೆಗೆ ಸಾವನ್ನಪ್ಪಿಕೊಳ್ಳಲು ಶಕ್ತಿಯನ್ನೀಯುವುದು

ಅಂಥ ಶಿಕ್ಷಣ ಪಡೆದವರೆ ಅಂಥ ವೀರಕಾರ್ಯಗಳನ್ನು ಮಾಡಲು ಸಾಧ್ಯ. ಅಹಿಂಸೆಯಲ್ಲಿ ಪೂರ್ಣ ಶ್ರದ್ಧೆಯಿಲ್ಲದವರು ಸರ್ವಸಾಮಾನ್ಯ ರಕ್ಷಣೋಪಾಯಗಳನ್ನು ಕಲಿತುಕೊಂಡು ಅಸಭ್ಯ ಯುವಕರ ಅಸಹ್ಯವರ್ತನೆಯಿಂದ ರಕ್ಷಣೆ ಹೊಂದಬಹುದು.

ನಮ್ಮ ಯುವಕರಿಗೆ ನಾನೊಂದು ಸವಾಲು ಹಾಕುತ್ತೇನೆ. ಸಭ್ಯರಾದ ಬಾಲಿಕೆಯರು ಹುಡುಗರ ಕಾಟಕ್ಕೆ ನಿರಂತರವೂ ಅಂಜಿ ಅಳುಕುವ ರೀತಿಯಲ್ಲಿ ನಮ್ಮ ತರುಣರು ಸರ್ವಸಾಮಾನ್ಯ ನಯಭಯವನ್ನು ಬಿಟ್ಟು ನೀತಿಗೆಟ್ಟು ನಡೆವುದಾದರೂ ಏಕೆ? ಎಂಬುದೆ ಮುಖ್ಯ ಪ್ರಶ್ನೆ. ಈಗಣ ಬಹ್ವಂಶ ಯುವಕರಲ್ಲಿ ಪರನಾರಿ ಸೋದರಭಾವನೆಯೆ ಇಲ್ಲ. ಸ್ತ್ರೀಯರನ್ನು ಪೂಜ್ಯ ಭಾವನೆಯಿಂದ ಕಂಡಲ್ಲಿ ದೇವರು ಮೆಚ್ಚುವನೆಂಬ ಪ್ರಾಚೀನ ಕಲ್ಪನೆ ಈಗ ಮಾಯವಾಗಿದೆ. ಆದರಿಂದ ನನಗೆ ಅತೀವ ವೇದನೆಯುಂಟಾಗಿದೆ. ಆದರೆ ಯುವಕರು ತಮ್ಮ ಕೀರ್ತಿಗೆ ಕಲಂಕಬರದಂತೆ ಜೋಕೆಯಿಂದಿರಬೇಕಾಗಿದೆ. ಅಶ್ಲೀಲ ವರ್ತನೆಗೆ ಕಾರಣರಾದ ತಮ್ಮ ಗೆಳೆಯರನ್ನು ಯುವಕರೇ ಬೈಲಿಗೆಳೆಯುವ ವ್ಯವಹಾರ ಕೈಕೊಳ್ಳಬೇಕು. ಪ್ರತಿಯೊಬ್ಬ ಸ್ತ್ರೀಯ ಮಾನರಕ್ಷಣೆ ತನ್ನ ಸೋದರಿಯ, ತನ್ನ ತಾಯಿಯ ಮಾನರಕ್ಷಣೆಯಷ್ಟು ಪ್ರಿಯವೆಂಬ ಪಾಠ ಯುವಕರು ಕಲಿಯಬೇಕು. ಸದಾಚರಣೆಯ ರೀತಿನೀತಿಗಳನ್ನು ಕಲಿಯದೆಹೋದರೆ ಅವರು ಪಡೆದ ಶಿಕ್ಷಣವೆಲ್ಲವೂ ಬರಿದು, ಬರಡು ಎಂದೆ ಅರ್ಥ.

ಶಾಲೆ ಕಾಲೇಜುಗಳ ಅಭ್ಯಾಸಪತ್ರಿಕೆಗೆ ಸಂಬಂಧಿಸಿದ ವಿಷಯುಗಳ ಬಗ್ಗೆ ವರ್ಗದಲ್ಲಿ ಪಾಠಹೇಳಿ ತರಬೇತು ವರ್ಾಾವಂತೆಯೆ ವಿದ್ಯಾರ್ಥಿಗಳಲ್ಲಿ ಸಜ್ಜನಿಕೆ ನಿಶ್ಚಯವಾಗಿ ಉಂಟಾಗುವಂತೆ ಪ್ರಯತ್ನಮಾಡುವುದು ನಮ್ಮ ಅಧ್ಯಾಪಕರ. ಪ್ರಾಧ್ಯಾಪಕರ ಪ್ರಮುಖ ಕಾರ್ಯವಲ್ಲವೆ?

(ಹರಿಜನ, ೩೧—೧೨—೧೯೩೮)

# "ಆಧುನಿಕ ಹುಡುಗಿ"

—

[ ' ಆಧುನಿಕ ಹುಡಿಗೆ ' ಎಂಬ ಶಬ್ದಕ್ಕೆ ವಿಶಿಷ್ಟಾರ್ಥವುಂಟು.................. ಇಂಗ್ಲಿಷು ಶಿಕ್ಷಣ ಪಡೆದವರೆಲ್ಲ ಆಧುನಿಕ ಹುಡುಗೆಯರಲ್ಲ. ಈ ' ಆಧುನಿಕ ಹುಡುಗೆ'ಯ ನೆರಳು ಸೋಂಕದ ಎಷ್ಟೊ ಹುಡುಗೆಯರನ್ನು ನಾಬಲ್ಲೆ. ಆದರೂ ಅನೇಕ ಹುಡುಗೆಯರು ' ಆಧುನಿಕ ಹುಡುಗೆ'ಯರಾದುದೂ ಸುಳ್ಳಲ್ಲ.]

ಹದಿನೊಂದು ಹುಡುಗೆಯರು ಕೂಡಿ ಬರೆದ ಓಲೆಯೊಂದು ನನಗೆ ಬಂದಿದೆ. ಅವರು ತಮ್ಮ ಹೆಸರು ವಿಳಾಸಗಳನ್ನು ಬರೆದು ಕಳಿಸಿದಾರೆ. ಅವರ ಓಲೆಯನ್ನು ಸರಿಯಾಗಿ ಅರ್ಥವಾಗುವಂತೆ, ಮೂಲ ಅರ್ಥಕ್ಕೆ ವ್ಯತಿ ಬಾರದಂತೆ, ಅಲ್ಲಲ್ಲಿ ತಿದ್ದಿ ಕೆಳಗೆ ಕೊಟ್ಟಿದೇನೆ :—

"೧೯೩೮ರ ಡಿಸೆಂಬರು ೩೧ನೆ ತಾರೀಕಿನ 'ಹರಿಜನ'ದ ಸಂಚಿಕೆಯಲ್ಲಿ 'ವಿದ್ಯಾರ್ಥಿಗಳಿಗೆ ನಾಚಿಕೆಗೇಡು' ಎಂಬ ತಲೆಕಟ್ಟಿನ ಬರೆಹದಲ್ಲಿ ವಿದ್ಯಾರ್ಥಿನಿಯೊಬ್ಬಳಿಗೆ ನೀವು ಪ್ರತ್ಯುತ್ತರವಿತ್ತಿದೀರಿ. ಅದರಲ್ಲಿ ತಾವು ಮಾಡಿದ ವಿಮರ್ಶೆ ಪಿಶೇಷ ವಿಚಾರಾರ್ಹವಾಗಿದೆ. 'ಆಧುನಿಕ ಹುಡುಗೆ' ಯೆಂದರೆ ಐದಾರು ಮನ್ಮಥರಿಗೆ ರತಿದೇವಿಯೆಂಬ ವಿಚಾರಕ್ಕೆ ಆಸ್ಪದ ಕೊಡುವಷ್ಟು ಈ ಆಧುನಿಕ ಹುಡುಗೆ ನಿಮ್ಮ ಮೆದುಳನ್ನು ಕೆಣಕಿರಬೇಕು. ಒಟ್ಟಿನಲ್ಲಿ ಸ್ತ್ರೀಯರ ವಿಷಯದಲ್ಲಿ ನೀವು ವ್ಯಕ್ತಪಡಿಸಿದ ಕಟುವಾದ ಅಭಿಪ್ರಾಯ ಅಷ್ಟೊಂದು ಉತ್ತೇಜನಕಾರಕವಾಗಿಲ್ಲ.

ಪುರುಷರಿಗೆ ಸಹಾಯವೀಯಲು, ಜೀವನದ ಎಡರುತೊಡರುಗಳಲ್ಲಿ ಸಮಪಾಲುಗೊಳ್ಳಲು ಸ್ತ್ರೀಯು ಇದೀಗ ಕತ್ತಲುಕೋಣೆಯಿಂದ ಹೊರಗೆ ಬರುತಿದ್ದಾಳೆ. ಈಗಲೂ ಗಂಡನು ಅವಳೊಂದಿಗೆ ಅನ್ಯಾಯವಾಗಿ ವ್ಯವ

ಹರಿಸುತಿದ್ದಾನೆ ಆದರೂ ಅವಳ ಮೇಲೆಯೆ ದೋಷಾರೋಪಣೆ ನಡೆದುದು ನಿಜವಾಗಿಯೂ ವಿಚಿತ್ರವಲ್ಲವೆ? ಸ್ತ್ರೀ ಪುರುಷರಿಬ್ಬರೂ ಸಮದೋಷಿಗಳೆಂದು ತೋರಿಸಬಹುದಾದ ಅನೇಕ ಉದಾಹರಣೆಗಳಿವೆ ಅದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಐದಾರು ಮನ್ಮಥರಿಗೆ ರತಿದೇವಿಯಾಗಬಯಸುವ ಹುಡುಗೆಯರೂ ಇರಬಹುದು ಇದು ಸತ್ಯವೆಂದಾದಲ್ಲಿ ತಲೆಯನ್ನು ಅರಸುತ್ತ ಬೀದಿಬೀದಿ ಅಲೆಯುವ ಮನ್ಮಥರೂ ಈ ಮೊದಲೆ ಇರಬೇಕೆಂಬ ಮಾತನ್ನು ಒಪ್ಪಿಕೊಳ್ಳಬೇಕು. ಆದರೆ ಆಧುನಿಕ ಹುಡುಗೆ-ಹುಡುಗರೆಲ್ಲರೂ ರತಿ-ಮನ್ಮಥರೆಂದು ಒಂದೇಟಿಗೆ ನಿರ್ಧರಿಸಲಾಗದು. ಅದು ಒಪ್ಪೂ ಅಲ್ಲ. ನೀವು ಅನೇಕ ಆಧುನಿಕ ಹುಡುಗೆಯರ ಪರಿಚಯ ಪಡೆದಿರಬೇಕು. ಅವರ ಛಲ, ಆತ್ಮತ್ಯಾಗ, ಬಲಿದಾನ ಮುಂತಾದ ಅನೇಕ ಸ್ತ್ರೀಸಹಜವಾದ ಶ್ರೇಷ್ಠ ಗುಣಗಳನ್ನು ಕಂಡು ನೀವು ಬೆರಗಾಗಿರಲೂಬಹುದು.

ನಿಮ್ಮ ಲಾಹೋರಿನ ಪತ್ರಲೇಖಿಕೆ ವಿವರಿಸಿದ ಗಂಡುಹುಡುಗರ ನೀತಿಗೆಟ್ಟ ನಡತೆಗಾಗಿ ಜನಜಾಗ್ರತಿಯನ್ನುಂಟುಮಾಡಬೇಕೆಂಬುದಾಗಿ ಬರೆದಿದೀರಿ. ಆದರೆ ನಾವಿಷ್ಟೆ ಹೇಳಬಯಸುವೆವು—ಅದು ಹುಡುಗೆಯರ ಕಾರ್ಯವಲ್ಲ. ಜೋಕ್ಕು ಮರ್ಯಾದೆಯ ಭೀತಿಯಿಂದ ಹಾಗೆ ಹೇಳುವೆವೆಂದು ಎಣಿಸಬೇಡಿ ಆದರೆ ಅದರಿಂದಾವ ಪ್ರಯೋಜನವೂ ಉಂಟಾಗಲಾರದೆಂಬ ದೃಷ್ಟಿಯಿಟ್ಟುಕೊಂಡೆ ಹೇಳುವುದು.

ಜಗದ್ವಂದ್ಯ ಪೂಜ್ಯ ವ್ಯಕ್ತಿಯು ಸ್ತ್ರೀಯರ ವಿಷಯದಲ್ಲಿ ಇಂಥ ಅಭಿಪ್ರಾಯ ತಳೆದುದು—'ನಾರಿ ನರಕದ ದಾರಿ' ಎಂಬ ಪುರಾತನ ಹುಳಿತ ನಾಣ್ಣುಡಿಯ ಪುನರುಕ್ತಿಯಲ್ಲವೆ?

ಮೇಲೆ ನಾವು ವ್ಯಕ್ತಪಡಿಸಿದ ಅಭಿಪ್ರಾಯ ಓದಿ ಆಧುನಿಕ ಹುಡುಗೆಯರು ತಮ್ಮನ್ನು ಗೌರವವಾಗಿ ಕಾಣುವುದಿಲ್ಲವೆಂಬ ಅಭಿಪ್ರಾಯ ದಯವಿಟ್ಟು ತಳೆಯಬೇಡಿರಿ. ಯುವಕರು ತಮ್ಮನ್ನೆಷ್ಟು ಗೌರವ ಮನ್ನಣೆಯಿಂದ ಕಾಣುವರೊ ಅಷ್ಟೆ ಗೌರವ ಮನ್ನಣೆಗಳಿಂದ ಹುಡುಗೆಯರೂ ತಮ್ಮನ್ನು ಕಾಣುವರು. ದಯಾದಾಕ್ಷಿಣ್ಯ ಸ್ತ್ರೀಯರಿಗೆ ಬೇಕಾಗಿಲ್ಲ ನಿಜವಾಗಿ ತಪ್ಪಿಗರಾದರೆ ತಮ್ಮ ತಪ್ಪು ತಿದ್ದಿಕೊಳ್ಳಲು ಅವರು ಸದಾ ಸಿದ್ಧರು. ಅವರನ್ನು ದೋಷಕ್ಕೆ ಗುರಿಮಾಡುವ ಮೊದಲು ಅವರ ದೋಷವನ್ನು ಅವರ ಮನಕ್ಕೆ ಬಿಂಬಿಸುವಂತೆ ಸಿದ್ಧಮಾಡಿ ತೋರಿಸಬೇಕು. ಈ ವಿಷಯದಲ್ಲಿ

"ಸ್ತ್ರೀಯರು ಪಾಪ!" ಎಂಬ ದಯೆಯ ಆವರಣದಲ್ಲಿ ಆತಗಲೂ ಅವರು ಒಪ್ಪಲಾರರು. ಇಲ್ಲವೆ ಮೌನವಾಗಿ ತಲೆತಗ್ಗಿಸಿ ನ್ಯಾಯಾಧೀಶನಿಗೆ ಮನ ಬಂದಂತೆ ದೋಷಾರೋಪಣೆ ಮಾಡಲು ಎಡೆಗೊಡುವುದಿಲ್ಲ ಸತ್ಯವನ್ನು ಎದುರಿಸಲೆಬೇಕು ಆಧುನಿಕ ಹುಡುಗಿಗೆ ಅಥವಾ ನಿಮ್ಮ ಶಬ್ದಗಳಲ್ಲಿ ಹೇಳುವುದಾದರೆ ರತಿದೇವಿಗೆ ಅದನ್ನೆದುರಿಸುವಷ್ಟು ಧೈರ್ಯವುಂಟು."

ಈಗ ೪೦ ವರ್ಷಗಳ ಹಿಂಗೆಯೆ—ಬಹುಶಃ ನನ್ನ ಪತ್ರಲೇಖಿಕೆಯರಲ್ಲಿ ಯಾರೂ ಹುಟ್ಟಿರಲಿಕ್ಕಿಲ್ಲ—ನಾನು ದಕ್ಷಿಣ ಆಫ್ರಿಕೆಯಲ್ಲಿ ಹಿಂದೂ ಸ್ತ್ರೀಯರ ಸೇವೆಗೆ ಆರಂಭಿಸಿದೆನೆಂದು ಬಹುಶಃ ಈ ಹುಡುಗಿಯರಿಗೆ ಗೊತ್ತಿರಲಾರದು. ಸ್ತ್ರೀಯರ ವಿಷಯವಾಗಿ ಅಗೌರವವಾದುದನ್ನು ಬರೆಯಲು ನನ್ನಿಂದೆಂದಿಗೂ ಸಾಧ್ಯವಿಲ್ಲ. ಸ್ತ್ರೀಯರ ವಿಷಯದಲ್ಲಿ ನನಗೆ ತುಂಬ ಗೌರವವಿರುವುದರಿಂದ ಅವರ ಬಗ್ಗೆ ಕಶ್ಮಲವಾದ ವಿಚಾರ ನನಗೆ ಬಾರದು. ಇಂಗ್ಲಿಷು ಗಾದೆಮಾತಿನಲ್ಲಿ ಹೇಳುವುದಾದರೆ ಸ್ತ್ರೀಯು ಪುರುಷನ ಶ್ರೇಷ್ಠ ಅರ್ಧಾಂಗಿನಿ (Better half). ವಿದ್ಯಾರ್ಥಿಗಳ ಹೇಯಕಾರ್ಯ ಹೊರಗೆಡಹುವುದಕ್ಕಾಗಿ ನಾನು ಬರೆದುದಲ್ಲದೆ ಹುಡುಗಿಯರ ಕುಂದನ್ನು ಪ್ರಚುರಪಡಿಸುವುದಕ್ಕಲ್ಲ. ರೋಗಕ್ಕೆ ತಕ್ಕ ಮದ್ದು ಹೇಳುವುದು ನನ್ನ ಕರ್ತವ್ಯವಾಗಿದ್ದರೆ ರೋಗಕ್ಕೆ ಕಾರಣವಾದ ವಿಷಯಗಳೆಲ್ಲವನ್ನೂ ವಿಶದವಾಗಿ ನಾನು ಹೇಳಲೆಬೇಕಲ್ಲವೆ?

'ಆಧುನಿಕ ಹುಡುಗಿ' ಎಂಬ ಶಬ್ದಕ್ಕೆ ವಿಶಿಷ್ಟಾರ್ಥವುಂಟು. ಆದುದರಿಂದ ಒಂದು ವಿಶಿಷ್ಟ ಗುಂಪನ್ನೆ ಉದ್ದೇಶಿಸಿ ನನ್ನ ಅಭಿಪ್ರಾಯ ವ್ಯಕ್ತಪಡಿಸುವ ಅಗತ್ಯವಿರಲಿಲ್ಲ. ಇಂಗ್ಲಿಷು ಶಿಕ್ಷಣ ಪಡೆವ ಹುಡುಗಿಯರೆಲ್ಲರೂ ಆಧುನಿಕ ಹುಡುಗಿಯರಲ್ಲ 'ಆಧುನಿಕ ಹುಡುಗಿ'ಯರ ನೆರಳೂ ಸೋಂಕದ ಅನೇಕ ಹುಡುಗಿಯರನ್ನೂ ನಾ ಬಲ್ಲೆ. ಆದರೂ ಕೆಲವರು ಆಧುನಿಕ ಹುಡುಗಿಯರಾದುದೂ ಸುಳ್ಳಲ್ಲ. ಈ ಆಧುನಿಕ ಹುಡುಗಿಯ ಅನುಕರಣ ಮಾಡಬಾರದೆಂಬುದಾಗಿ, ಮತ್ತು ಈಗಾಗಲೆ ತೊಡಕಾಗಿ ಪರಿಣಮಿಸಿದ ಸಮಸ್ಯೆಯನ್ನು ಮತ್ತಿಷ್ಟು ಗಡಚಾಗಿ ಮಾಡಬಾರದಾಗಿ ಭರತಖಂಡದ ವಿದ್ಯಾರ್ಥಿನಿಯರಿಗೆ ಎಚ್ಚರಿಕೆ—ಈ ನನ್ನ ಹೇಳಿಕೆ. ಪಂಜಾಬಿನ ಪತ್ರಬಂದಾಗಲೆ ಆಂಧ್ರ ವಿದ್ಯಾರ್ಥಿನಿಯ ಓಲೆಯೊಂದು ಬಂದಿತ್ತು ಅದರಲ್ಲವಳು ಆಂಧ್ರ ವಿದ್ಯಾರ್ಥಿಗಳ ಅಸಹ್ಯ ವರ್ತನೆಯ ಬಗ್ಗೆ ದೂರಿದ್ದಳು; ಅವಳು ಬಣ್ಣಿಸಿದ ವಿವರದಿಂದ

ಹೇಳುವುದಾದರೆ ಲಾಹೋರಿನ ಹುಡುಗರ ನಡತೆಗಿಂತ ಆಂಧ್ರ ವಿದ್ಯಾರ್ಥಿಗಳ ನಡತೆ ಅತಿ ತುಚ್ಛವಾಗಿತ್ತು. ಸಾದಾ ಬಟ್ಟೆಯಿಂದ ತಮಗೆ ಯಾವ ರಕ್ಷಣೆಯೂ ಆಗಲಾರದೆಂದೂ ವಿದ್ಯಾರ್ಥಿಗಳ ಹೇಯ ವರ್ತನೆಯನ್ನು ಬೈಲಿಗೆಳೆಯುವ ಸಾಕಷ್ಟು ಧೈರ್ಯ ತನ್ನ ಗೆಳತಿಯರಲ್ಲಿ ಇಲ್ಲವೆಂತಲೂ ಈ ಆಂಧ್ರ ಪುತ್ರಿ ಬರೆದಿದಾಳೆ. ಅಲ್ಲದೆ ಹುಡುಗರ ವರ್ತನೆ ನಿಜವಾಗಿಯೂ ತಮ್ಮ ವಿದ್ಯಾಲಯಕ್ಕೆ ಕಲಂಕಪ್ರಾಯವಾಗಿದೆಯೆಂದೂ ಬರೆದಿದಾಳೆ. ಆಂಧ್ರ ವಿಶ್ವವಿದ್ಯಾಲಯದ ಅಧಿಕಾರಿಗಳು ಈ ದೂರುಗಳ ಕಡೆಗೆ ಗಮನ ಕೊಡಬೇಕಾಗಿ ನನ್ನ ವಿಜ್ಞಾಪನೆ

ವಿದ್ಯಾರ್ಥಿಗಳ ಅಸಭ್ಯ ವರ್ತನೆಯ ವಿರುದ್ಧ ದೊಡ್ಡ ಆಂದೋಲನ ವೆಬ್ಬಿಸಲು ಈ ಹದಿನೊಂದು ಹುಡುಗೆಯರನ್ನು ನಾನು ಆಮಂತ್ರಿಸಿದೆ. ತನ್ನ ಉದ್ಧಾರವನ್ನು ತಾನೇ ಮಾಡಿಕೊಳ್ಳುವ ಭಕ್ತನಿಗೆ ದೇವರ ಅಭಯ ಹಸ್ತವಿದ್ದೆ ಇದೆ. ಗಂಡಸಿನ ಕೀಳು ನಡತೆಯಿಂದ ಕ್ಷಸಿಕೊಳ್ಳಲು ಹುಡುಗೆಯರೆಲ್ಲರೂ ಸ್ವರಕ್ಷಣೆಯ ಕಲೆಯನ್ನು ಅಭ್ಯಸಿಸಬೇಕು.

**ಹರಿಜನ, ೪-೨-೧೯೩೯.**

# “ ತಂಗಿಯೊಬ್ಬಳ ಪ್ರಶ್ನೆಗಳು ”

[ ಎಲ್ಲಿ ವಾತಾವರಣವೆ ಅಹಿಂಸಾಮಯವಾಗಿದೆಯೊ, ಎಲ್ಲಿ ಅಹಿಂಸೆಯ ಪ್ರವಚನ ನಿತ್ಯ ನಡೆದಿದೆಯೆ—ಅಲ್ಲಿ ಸ್ತ್ರೀಯು ತಾನು ಪರಾವಲಂಬಿನಿ, ಅಬಲೆ, ಸಹಾಯಹೀನಳೆಂದು ಭಾವಿಸಲಾರಳು. ಅವಳು ಪವಿತ್ರಳಿದ್ದಲ್ಲಿ ಎಂದಿಗೂ ಸಹಾಯಹೀನಳಾಗಲಾರಳು. ಆ ಪವಿತ್ರತೆಯೆ ಅವಳಿಗೆ ತನ್ನ ಬಲದ ಅರಿವನ್ನುಂಟು ಮಾಡುವುದು. ]

ಪ್ರಶ್ನೆ :—ಸ್ತ್ರೀಯ ಮಾನವನ್ನು ರಕ್ಷಿಸುವ ಬಗೆ ಹೇಗೆ ?

ಉತ್ತರ :—ಈ ಪ್ರಶ್ನೆಯನ್ನು ಎರಡು ಬಗೆಯಿಂದ ವಿಚಾರಿಸೋಣ. (1) ಸ್ತ್ರೀಯು ತನ್ನ ಮಾನವನ್ನು ಹೇಗೆ ರಕ್ಷಿಸಿಕೊಳ್ಳಬೇಕು ? (2) ಅವಳ ಸಂಬಂಧಿಕರು ಅವಳ ಮಾನ ರಕ್ಷಣೆ ಹೇಗೆ ಮಾಡಬೇಕು ?

ಮೊದಲನೆಯ ಪ್ರಶ್ನೆಯ ವಿಷಯವಿದ್ದಲ್ಲಿ:—ಎಲ್ಲಿ ವಾತಾವರಣವೆ ಅಹಿಂಸಾಮಯವಾಗಿದೆಯೊ, ಎಲ್ಲಿ ಅಹಿಂಸೆಯ ಪ್ರವಚನ ನಿತ್ಯ ನಡೆ ದಿದೆಯೊ—ಅಲ್ಲಿ ಸ್ತ್ರೀಯು ತಾನು ಪರಾವಲಂಬಿನಿ, ಅಬಲೆ, ಸಹಾಯ ಹೀನಳೆಂದು ಭಾವಿಸಲಾರಳು. ಅವಳು ಪವಿತ್ರಳಿದ್ದಲ್ಲಿ ಎಂದಿಗೂ ಸಹಾಯ ಹೀನಳಾಗಲಾರಳು. ಆ ಪವಿತ್ರತೆಯೆ ಅವಳಿಗೆ ತನ್ನ ಬಲದ ಅರಿವನ್ನುಂಟು ಮಾಡುವುದು. ಸ್ತ್ರೀಯ ಇಚ್ಛೆಗೆ ವಿರೋಧವಾಗಿ ಅವಳ ಪಾವಿತ್ರ್ಯ ಭಂಗ ಮಾಡಲು ಶಾರೀರಿಕ ಬಲದಿಂದ ಅಸಾಧ್ಯವೆಂದು ನಾನೆಷ್ಟೋಸಲ ಹೇಳಿ ದ್ದೇನೆ. ಸ್ತ್ರೀಯು ಭಯಗ್ರಸ್ತಳಾದರೆ ಇಲ್ಲವೆ ತನ್ನ ನೈತಿಕಬಲವನ್ನರಿಯದೆ ಹೋದರೆ ಮಾತ್ರ ಪುರುಷನ ಬಲಾತ್ಕಾರಕ್ಕೆ ಒಳಗಾಗುವಳು. ಮೈಮೇಲೆ ಏರಿಬಂದವನ ಶಾರೀರಿಕ ಬಲವನ್ನು ತಡೆಯಲು ಅವಳಿಗೆ ಆಗದಿದ್ದಲ್ಲಿ, ಪಾವಿತ್ರ್ಯಭಂಗವಾಗುವುದರೊಳಗಾಗಿಯೆ ಸಾವನ್ನಪ್ಪಿಕೊಳ್ಳಲು ತನ್ನ ಪಾವಿತ್ರ್ಯವೇ ಅವಳಿಗೆ ಶಕ್ತಿಯೀಯುವುದು. ನೀವು ಸೀತಾದೇವಿಯ ಉದಾಹರಣೆಯನ್ನು ತೆಗೆದುಕೊಳ್ಳಬಹುದು. ಶಾರೀರಿಕ ಬಲದ ದೃಷ್ಟಿ ಯಿಂದ ರಾವಣನೆದುರು ಅವಳು ತೃಣಸಮಾನಳು; ಆದರೆ ಅವನ ರಾಕ್ಷಸ ಬಲಕ್ಕಿಂತ ಅವಳ ಪಾವಿತ್ರ್ಯದ ಶಕ್ತಿ ಎಷ್ಟೋ ಪಾಲು ಹೆಚ್ಚಿನದು. ನಾನಾ ರೀತಿಯ ವಿಲೋಭನೆಯಿಂದ ಅವಳನ್ನು ವಶಪಡಿಸಿಕೊಳ್ಳಲೆತ್ನಿಸಿದನೇ ಹೊರತು ಕಾಮಾಂಧನಾದ ಅವನಿಗೆ ಅವಳ ಮೈಸೋಂಕಲೂ ಸಾಧ್ಯ ವಾಗಲಿಲ್ಲ. ಆದರೆ ಸ್ತ್ರೀಯು ತನ್ನ ಶಾರೀರಿಕ ಬಲವನ್ನು ಇಲ್ಲವೆ ತನ್ನಲ್ಲಿದ್ದ ಯಾವುದೊಂದು ಅಸ್ತ್ರವನ್ನು ನೆಚ್ಚಿಕೊಂಡರೆ ಅವಳ ಶಕ್ತಿ ಕುಂದುವುದೆ ತಡ ಪರಾಜಿತಳಾಗುವುದು ಖಂಡಿತ.

ಎರಡನೆಯ ಪ್ರಶ್ನೆ ಸುಲಭವಾದುದು. ಇಂಥ ಪ್ರಸಂಗಗಳಲ್ಲಿ ಆಕ್ರಮಣಕಾರನ ಹಾಗೂ ಹುಡುಗೆಯ ಮಧ್ಯೆ ಅವಳ ರಕ್ಷಕ—ಬಂಧು ವಾಗಲಿ, ತಂದೆ ಅಥವಾ ಮಿತ್ರನಾಗಲಿ—ಇರುತ್ತಾನೆ. ರಕ್ಷಕನು ಆಕ್ರಮಣ ಕಾರನ ಕುವಿಚಾರವನ್ನು ಪರಿವರ್ತಿಸಲೂಬಹುದು; ಇಲ್ಲವೆ ಅವನನ್ನು ತಡೆಯುವುದಕ್ಕೆ ತನ್ನ ಪ್ರಾಣವನ್ನೇ ಅರ್ಪಿಸಬಹುದು. ಇಂಥ ಪ್ರಾಣಾರ್ಪಣದಿಂದ ಅವನು ತನ್ನ ಕರ್ತವ್ಯವನ್ನು ಮಾಡುತ್ತಾನಲ್ಲದೆ, ತನ್ನ

ಆಶ್ರಿತಳಿಗೆ ಒಂದು ಹೊಸ ಬಲವನ್ನೂ ಕೊಡುತ್ತಾನೆ. ಏಕೆಂದರೆ, ಅವಳಿಗೆ ತನ್ನ ಮಾನರಕ್ಷಣೆಯ ಬಗ್ಗೆ ಅವನು ಮಾರ್ಗದರ್ಶಕನಾಗುತ್ತಾನೆ.

ಪ್ರಶ್ನೆ :—ಇದೇ ದೊಡ್ಡ ಒಗಟು. ಸ್ತ್ರೀಯು ಅಷ್ಟು ಸುಲಭವಾಗಿ ಪ್ರಾಣ ತೆರಬಲ್ಲಳೆ?

ಉತ್ತರ :—ಅಹುದು. ಪುರುಷನಿಗಿಂತ ಸುಲಭವಾಗಿ ತೆರಬಲ್ಲಳು. ಇದಕ್ಕಿಂತಲೂ ಸಾಮಾನ್ಯವಾದ ಉದ್ದೇಶಗಳಿಗಾಗಿ ಹೆಣ್ಣುಮಕ್ಕಳು ಪ್ರಾಣತ್ಯಾಗ ಮಾಡಬಲ್ಲರೆಂದು ನಾನು ಬಲ್ಲೆ. ಈಗ ಕೆಲದಿನಗಳ ಹಿಂದೆ ೨೦ ವರ್ಷದ ಹುಡುಗಿಯೊಬ್ಬಳು ಸುಟ್ಟುಕೊಂಡು ಸತ್ತಳು. 'ಓದು ಬರೆಹ'ದ ಅಭ್ಯಾಸಕ್ಕೆ ಒಪ್ಪದಿದ್ದುದರಿಂದ ಮನೆಯವರು ಅವಳಿಗೆ ಚಿತ್ರ ಹಿಂಸೆ ಕೊಡುತಿದ್ದುದೆ ಅದಕ್ಕೆ ಕಾರಣ. ಶಾಂತದೃಢಚಿತ್ತದಿಂದ ಅವಳು ಸಾವನ್ನು ಎದುರುಗೊಂಡಳು. ದೀಪದಿಂದ ತನ್ನ ಸೀರೆಗೆ ಬೆಂಕಿ ಹಚ್ಚಿ ಕೊಂಡಳು. ಆಗ ಅವಳು ಕೊಂಚವೂ ಕೂಗಲಿಲ್ಲ. ಹೀಗಾಗಿ ಪಕ್ಕದ ಕೋಣೆಯಲ್ಲಿದ್ದವರಿಗೆ ಎಲ್ಲವೂ ಸಮಾಪ್ತವಾಗುವವರೆಗೆ ಅದರ ಸುಳಿವೇ ಇರಲಿಲ್ಲ. ಈ ಹುಡುಗಿಯ ಕಾರ್ಯ ಪ್ರಶಂಸನೀಯವಾದುದೆಂದು ಈ ವಿವರಗಳನ್ನಿಲ್ಲಿ ನಾ ಕೊಡುತ್ತಿಲ್ಲ. ಆದರೆ ಈ ಉದಾಹರಣೆ ಸ್ತ್ರೀಯು ಅದೆಷ್ಟು ಸುಲಭವಾಗಿ ಆತ್ಮಾರ್ಪಣ ಮಾಡಬಲ್ಲಳೆಂದು ತೋರುವುದಕ್ಕಾಗಿ ಮಾತ್ರ. ಹೀಗೆ ಪ್ರಾಣಾರ್ಪಣ ಮಾಡುವಷ್ಟು ಕೆಚ್ಚು ನನಗಂತೂ ಖಂಡಿತ ವಾಗಿಯೂ ಇಲ್ಲ. ಈ ಸಾಹಸಕ್ಕೆ ಬೇಕಾದುದು ಅಂತಃಪ್ರೇರಣೆಯ ತೇಜ ವಲ್ಲದೆ ಬಾಹ್ಯದ ಬೆಳಕಲ್ಲ.

ಪ್ರಶ್ನೆ :— ಮಕ್ಕಳೊಂದಿಗೆ ವ್ಯವಹರಿಸುವಾಗ ಕೋಪ-ಹಿಂಸೆಗಳನ್ನು ಪೂರ್ಣವಾಗಿ ತಪ್ಪಿಸುವುದು ಹೇಗೆ?

ಉ|| :—ಲಾಲಯೇತ್ ಪಂಚವರ್ಷಾಣಿ ದಶವರ್ಷಾಣಿ ತಾಡಯೇತ್ |
ಪ್ರಾಪ್ತೇಷು ಷೋಡಶೇವರ್ಷೇ ಪುತ್ರೇ ಮಿತ್ರ ವದಾಚರೇತ್ ||

(ಐದು ವರ್ಷಗಳವರೆಗೆ ಮಕ್ಕಳನ್ನು ಲಾಲಿಸಬೇಕು. ಹತ್ತುವರ್ಷ ಗಳವರೆಗೆ ದಂಡಿಸಬೇಕು. ಮತ್ತು ಹದಿನಾರುವರ್ಷದವರಾದ ರೆಂದರೆ ಅವರೊಡನೆ ಮಿತ್ರರಂತೆ ನಡೆಯಬೇಕು.)

ಈ ಬಗ್ಗೆ ನೀವು ಯೋಚಿಸಕೂಡದು. ಕೆಲಕಾಲ ಮಕ್ಕಳಮೇಲೆ ರೇಗುವ ಪ್ರಸಂಗ ಬಂದರೆ ಆ ಕೋಪ ಅಹಿಂಸಾರೂಪವಾದ ಕೋಪವೆಂದು ನನ್ನ ಅಭಿಪ್ರಾಯ ಈ ಸಂದರ್ಭದಲ್ಲಿ ಜಾಣರಾದ ತಾಯಂದಿರೇ ನನ್ನ ದೃಷ್ಟಿಯಲ್ಲಿ ಇದ್ದಾರಲ್ಲದೆ ತಾಯಿತನಕ್ಕೆ ಅಯೋಗ್ಯರಾದ ಅಜ್ಞ ತಾಯಂದಿರಲ್ಲ.

**ಹರಿಜನ, ೧–೯–೧೯೪೦.**

# " ಬಾಲ್ಯವಿವಾಹದ ಅಭಿಶಾಪ "

---

[ಬಾಲ್ಯವಿವಾಹ ಪದ್ಧತಿ ನೈತಿಕವಾಗೂ ಶಾರೀರಿಕ ಉಭಯ ದೃಷ್ಟಿಯಿಂದಲೂ ಹಾನಿಕರವಾದುದು. ಅದರಿಂದ ನಮ್ಮ ನೈತಿಕ ಅಧೋಗತಿಯಾಗುವುದಲ್ಲದೆ ದೈಹಿಕ ಬಲವೂ ಹ್ರಾಸಗೊಳ್ಳುವುದು. ಇಂಥ ಅಸಿಷ್ಟ ಸಾಂಪ್ರದಾಯಗಳಿಗೆ ತಲೆಬಾಗುವುದೆಂದರೆ ನಾವು ದೇವರಿಂದ ಮತ್ತು ಸ್ವರಾಜ್ಯದಿಂದ ದೂರಸರಿದಂತೆಯೇ ಸರಿ.]

ಶ್ರೀಮತಿ ಮಾರ್ಗರೆಟ್. ಈ. ಕಜಿನ್ಸ್ ಎಂಬವರು ಮದ್ರಾಸಿನಲ್ಲಿ ಸಂಭವಿಸಿದ ದುರಂತ ಘಟನೆಯೊಂದರ ವಿವರವನ್ನು ಬರೆದು ತಿಳಿಸಿದಾರೆ. ಬಾಲ್ಯವಿವಾಹವೆ ಈ ಘಟನೆಗೆ ಮೂಲಕಾರಣ. ಗಂಡನ ವಯಸ್ಸು ೨೬, ಹೆಂಡತಿಯ ವಯಸ್ಸು ೧೩. ಗಂಡಹೆಂಡಿರು ೧೩ ದಿನ ಸಹ ಕೂಡಿ ಬಾಳುವೆ ಮಾಡಿರಲಿಲ್ಲ. ಅಷ್ಟರಲ್ಲಿ ಹುಡುಗಿ ಸುಟ್ಟುಕೊಂಡು ಸತ್ತಳು. ಗಂಡನೆಂಬ ಅಮಾನುಷ ಪ್ರಾಣಿಯ ಅಸಹ್ಯ ಬಲಾತ್ಕಾರಕ್ಕೆ ಬೇಸತ್ತು ಆಕೆ ಆತ್ಮಹತ್ಯೆ ಮಾಡಿಕೊಂಡಳೆಂದು ಪಂಚರ ಅಭಿಪ್ರಾಯ. ಬಾಲಿಕೆಯ ಮೃತಾವಸ್ಥೆಯಲ್ಲಿಯ ವಾಙ್ಮೂಲ ಪರಿಶೀಲಿಸಿದಲ್ಲಿ ಅವಳ ಗಂಡನೆ ಬೆಂಕಿಯಿತ್ತನೆಂದು ತೋರುತ್ತದೆ. ಕಾಮಕ್ಕೆ ಕರುಣೆಯೆಲ್ಲಿ—ವಿವೇಕವೆಲ್ಲಿ?

ಹುಡುಗಿಯ ಮರಣ ಹೇಗಾಯಿತೆಂಬುದರ ವಿಷಯವಾಗಿ ವಾದ ವಿವಾದ ಈಗ ಬೇಕಿಲ್ಲ. ಆದರೆ ಈ ಕೆಳಗೆ ನಮೂದಿಸಿದ ಸಂಗತಿಗಳು ಮಾತ್ರ ನಿರ್ವಿವಾದವಾದವುಗಳು :—

(೧) ಲಗ್ನವಾದಾಗ ಆ ಹುಡುಗಿಯ ವಯಸ್ಸು ಹದಿಮೂರು.

(೨) ಅವಳಿಗೆ ಸಂಭೋಗದ ಇಚ್ಛೆ ಸ್ವಲ್ಪವೂ ಇರಲಿಲ್ಲ. ಗಂಡನ ಅತಿ ಕ್ರಮಣವನ್ನು ಸಲಸಲವೂ ವಿರೋಧಿಸಿದಾಳೆ.

(೩) ಗಂಡನೆಂಬ ಪ್ರಾಣಿ ಕ್ರೂರವಾಗಿ ಅವಳಮೇಲೆ ಬಲಾತ್ಕಾರ ಮಾಡಿದಾನೆ.

(೪) ಈಗ ಅವಳು ಈ ಲೋಕದಲ್ಲಿಲ್ಲ.

ಪಶುತುಲ್ಯವಾದ ಪದ್ಧತಿಗೆ ಧಾರ್ಮಿಕ ಮುದ್ರೆಯೊತ್ತುವುದು ಧರ್ಮ ವಲ್ಲ; ಅದು ಅಧರ್ಮ. ಸ್ಮೃತಿಗಳು ಪರಸ್ಪರ ವಿರೋಧಕವಾದ ಶ್ಲೋಕಗಳಿಂದ ತುಂಬಿದುದರಿಂದ ನಾವು ಒಂದು ನಿರ್ಧಾರಕ್ಕೆ ಬರಬಹುದು. ಸರ್ವಸಂಮತ ವಾಗಿ ಪ್ರಸಿದ್ಧವಾಗಿರುವ ನೀತಿಗೆ, ವಿಶೇಷವಾಗಿ ಸ್ಮೃತಿಗಳಲ್ಲಿ ಉದಾಹರಿಸಿದ ನೀತಿಯ ತತ್ತ್ವಗಳಿಗೆ ಅಸಂಬದ್ಧವಾಗಿರುವ ಆ ಪರಸ್ಪರ ವಿರೋಧಕ ಶ್ಲೋಕ ಗಳನ್ನು ಪ್ರಕ್ಷೇಪವೆಂದೇ ಗಣಿಸಿ ಬಿಟ್ಟುಬಿಡಬೇಕು. ಆತ್ಮಸಂಯಮನದ ವಿಷಯವಾಗಿ ಸ್ಫೂರ್ತಿಗೊಳಿಸುವ ಶ್ಲೋಕಗಳನ್ನು ಬರೆದ ಲೇಖನಿಯು ಅದೇ ಕಾಲಕ್ಕೆ ಕಾಮಲಾಲಸೆಗೆ ಉತ್ತೇಜನವೀಯುವ ಶ್ಲೋಕಗಳನ್ನು ಬರೆಯು ವುದು ಅಸಾಧ್ಯ. ಹುಡುಗೆ ಋತುಮತಿಯಾಗುವ ಮೊದಲೆ ಮದುವೆಯಾಗದೆ ಇರುವುದು ಮಹಾಪಾಪವೆಂದು ಆತ್ಮಸಂಯಮವನರಿಯದ ದುಶ್ಚಟಲೋಲು ಪನಾದ ವ್ಯಕ್ತಿ ಮಾತ್ರ ನುಡಿಯಬಲ್ಲ. ಹುಡುಗೆ ಮೈನೆರೆತು ಹಲವು ವರ್ಷಗಳಾಗುವ ಮೊದಲೆ ಲಗ್ನವಾಗುವುದು ಪಾಪಕರವೆಂದು ಗಣಿಸಬೇಕು. ನೆರೆಯುವ ಮೊದಲು ಮದುವೆಯಸೊಲ್ಲೂ ಕೇಳಿಬರಬಾರದು. ಕುಡಿಮೀಸೆ ಒಡೆದ ಹುಡುಗ ಮಕ್ಕಳನ್ನು ಹೆರಲು ಹೇಗೆ ಅಯೋಗ್ಯನೊ ಹಾಗೆಯೇ ಯೌವನಾವಸ್ಥೆಯಲ್ಲಿ ಅದೀಗ ಕಾಲಿಟ್ಟ ಹುಡುಗೆಯೂ ಮಕ್ಕಳನ್ನು ಹೆರಲು ಅಯೋಗ್ಯಳು.

ಬಾಲ್ಯವಿವಾಹ ಪದ್ಧತಿಯು ನೈತಿಕ ಹಾಗೂ ಶಾರೀರಿಕ ಉಭಯ ದೃಷ್ಟಿಯಿಂದಲೂ ಹಾನಿಕರ. ಅದರಿಂದ ನಮ್ಮ ನೈತಿಕ ಅಧೋಗತಿಯಾಗು ವುದಲ್ಲದೆ ನಮ್ಮ ದೈಹಿಕಬಲವೂ ಹ್ರಾಸಗೊಳ್ಳುವುದು. ಇಂಥ ಅನಿಷ್ಟ ಸಾಂಪ್ರದಾಯಗಳಿಗೆ ತಲೆಗೊಡುವುದೆಂದರೆ ನಾವು ದೇವರಿಂದ ಮತ್ತು ಸ್ವರಾಜ್ಯದಿಂದ ದೂರ ಸರಿದಂತೆಯೆ ಸರಿ. ಹುಡುಗೆಯ ಎಳೆಯ ವಯಸ್ಸಿನ

ಬಗ್ಗೆ ವಿಚಾರವನ್ನೇ ಮಾಡದ ಮನುಷ್ಯನಿಗೆ ಎಲ್ಲಿಯ ದೇವರಸ್ಮರಣೆ? ಅಪಕ್ವವಾಗಿ ಬೆಳೆದ ಜನತೆಗೆ ಸ್ವಾತಂತ್ರ್ಯಯುದ್ಧ ಮಾಡಲೂ ಶಕ್ತಿಯುಂಟಾಗಲಾರದು; ಒಂದುವೇಳೆ ಸ್ವಾತಂತ್ರ್ಯ ಲಭಿಸಿದರೂ ಅದು ಕೊನೆಯವರೆಗೆ ಉಳಿಯಲಾರದು. ಸ್ವರಾಜ್ಯಸಿದ್ಧಿಯೆಂದರೆ ರಾಜಕೀಯ ಜಾಗ್ರತಿ ಮಾತ್ರವಲ್ಲ; ಸಾಮಾಜಿಕ, ಶೈಕಣಿಕ, ನೈತಿಕ, ಆರ್ಥಿಕ, ಸರ್ವಾಂಗೀಣ ಜಾಗ್ರುತಿಯುಂಟಾಗುವುದು ಸ್ವರಾಜ್ಯಸಿದ್ಧಿ.

ವಿವಾಹದ ವಯೋಮಾನವನ್ನು ಹೆಚ್ಚಿಸುವುದಕ್ಕೆ ಕಟ್ಟಳೆಯ ಒಪ್ಪಿಗೆಯನ್ನು ಪಡೆಯುವ ಪ್ರಯತ್ನ ನಡೆದಿದೆ. ಇದರಿಂದ ಕೆಲಜನ—ಸಂಖ್ಯೆಯ ದೃಷ್ಟಿಯಿಂದ ಹೇಳುವುದಾದರೆ ತೀರ ಸ್ವಲ್ಪಜನ—ಸುಧಾರಿಸಬಹುದು. ಆದರೆ ಜನಸಾಮಾನ್ಯರಲ್ಲಿ ಅಂಟಿದ ಈ ಸಾಮಾಜಿಕ ಅನಿಷ್ಟ ರೋಗವನ್ನು ಕಾಯಿದೆ ಕಟ್ಟಳೆಗಳಿಂದ ಪರಿಹರಿಸುವುದು ಸಾಧ್ಯವಿಲ್ಲ. ಜಾಗೃತವಾದ ಜನಮತವೆ ಅದನ್ನು ಪರಿಹರಿಸಬಲ್ಲುದು. ಇಂಥ ವಿಷಯಗಳಲ್ಲಿ ಕಟ್ಟಳೆ ಮಾಡುವುದಕ್ಕೆ ನನ್ನ ವಿರೋಧವಿಲ್ಲ. ಆದರೆ ಜನಮತವನ್ನೆ ಆ ರೀತಿಯಾಗಿ ಸಿದ್ಧಪಡಿಸುವ ವ್ಯವಧಾನಕ್ಕೆ ನನ್ನಬೆಂಬಲ ಹೆಚ್ಚು. ಬಾಲ್ಯವಿವಾಹಕ್ಕೆ ವಿರುದ್ಧವಾಗಿ ಸಜೀವ ಜನಮತವಿದ್ದಿದ್ದರೆ, ಮದ್ರಾಸಿನ ಈ ಘಟನೆ ಎಂದಿಗೂ ಸಂಭವಿಸುತ್ತಿರಲಿಲ್ಲ. ಈ ಘಟನೆಗೆ ಕಾರಣೀಭೂತನಾದ ಹುಡುಗ ಅಶಿಕ್ಷಿತ ಕೂಲಿಯಾಳಲ್ಲ; ಸುಶಿಕ್ಷಿತ ಬುದ್ಧಿವಂತ ಟೈಪಿಸ್ಟ (Typist). ಎಳೆಯ ವಯಸ್ಸಿನ ಬಾಲಿಕೆಯರನ್ನು ಮದುವೆಯಾಗುವ ಇಲ್ಲವೆ ಒಕ್ಕೊಡುವ ವಿಷಯದಲ್ಲಿ ಜನಾಭಿಪ್ರಾಯ ವಿರೋಧವಾಗಿದ್ದರೆ ಈ ಹುಡುಗನಿಗೆ ಚಿಕ್ಕ ಬಾಲಿಕೆಯನ್ನು ಮದುವೆಯಾಗಲಿಕ್ಕಾಗಲಿ ಸ್ಪರ್ಶಿಸಲಿಕ್ಕಾಗಲಿ ಧೈರ್ಯವಾಗುತಿದ್ದಿಲ್ಲ. ಸರ್ವಸಾಮಾನ್ಯವಾಗಿ ಹದಿನೆಂಟಕ್ಕೂ ಕಡಿಮೆ ವಯಸ್ಸಿನ ಹುಡುಗೆಯರ ಮದುವೆ ಆಗಲೇ ಕೂಡದು.

ಯಂಗ್ ಇಂಡಿಯಾ, ೨೬-೮-೧೯೨೬.

# " ಬಾಲ್ಯವಿವಾಹದ ಸಮರ್ಥನೆ "

[ ನೈತಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಎಲ್ಲ ದೃಷ್ಟಿಯಿಂದಲೂ ನಮ್ಮಲ್ಲಿ ಅನೇಕ ದೋಷಗಳಿವೆ. ಅವುಗಳ ವಿಷಯದಲ್ಲಿ ಶಾಂತವ್ಯಾಸಂಗ, ಸೂಕ್ಷ್ಮ ಸಂಶೋಧನೆ, ಕುಶಲಕಾರ್ಯ, ಅಚ್ಚುಕಟ್ಟಾದ ವಿವರಣೆ, ಸ್ಪಷ್ಟವಿಚಾರ—ಎಲ್ಲಕ್ಕೂ ಮುಖ್ಯವಾಗಿ ವಿವೇಕಯುಕ್ತ ನಿಷ್ಪಕ್ಷಪಾತನಿರ್ಣಯ ಅವಶ್ಯ ಬೇಕು ]

'ಯಂಗ್ ಇಂಡಿಯ'ದ ಓದುಗರೊಬ್ಬರು ಹೀಗೆ ಬರೆಯುತ್ತಾರೆ :

"೧೯೨೬ ನೆಯ 'ಯಂಗ್ ಇಂಡಿಯ' ಸಂಚಿಕೆಯಲ್ಲಿ 'ಬಾಲ್ಯ ವಿವಾಹದ ಅಭಿಶಾಪ' ವೆಂಬ ತಮ್ಮ ಲೇಖದಲ್ಲಿ 'ಹುಡುಗೆ ಋತುಮತಿ ಯಾಗುವವರೆಗೆ ಮದುವೆಯಾಗದೆ ಇರುವುದು ಮಹಾ ಪಾಪವೆಂದು ಆತ್ಮಸಂಯಮವನರಿಯದ, ದುಶ್ಚಟಲೋಲುಪನಾದ ವ್ಯಕ್ತಿಮಾತ್ರ ನುಡಿಯಬಲ್ಲ' ಎಂಬ ವಾಕ್ಯಸರಣಿಯನ್ನೋದಿ ನನಗೆ ತುಂಬ ವ್ಯಥೆ ಯಾಯಿತು.

ನಿಮ್ಮಿಂದ ಭಿನ್ನಾಭಿಪ್ರಾಯವುಳ್ಳವರನ್ನು ಉದಾರ ದೃಷ್ಟಿಯಿಂದ ತಾವೇಕೆ ಕಾಣುವುದಿಲ್ಲವೆಂದು ನನಗೆ ಹೊಳೆಯಲೊಲ್ಲದು. ಸ್ಮೃತಿಕಾರರು ಬಾಲ್ಯವಿವಾಹಕ್ಕೆ ಸಮ್ಮತಿಯಿತ್ತುದು ಮಹಾಪರಾಧವೆಂದು ಹೇಳಲು ಯಾರ ಅಭ್ಯಂತರವೂ ಇಲ್ಲ. ಆದರೆ ಬಾಲ್ಯವಿವಾಹ ಅವಶ್ಯವೆಂದು ತಿಳಿದವರು ದುಶ್ಚರಿತ್ರರೆಂದು ದೂಷಿಸುವುದು ಅನುಚಿತವೆಂದು ನನಗೆ ತೋರುತ್ತದೆ. ವಿವಾದಾಸ್ಪದ ವಿಷಯಗಳಲ್ಲಿ ಈ ದೂಷಣೆ ವಿನಯದ ಕಟ್ಟನ್ನು ಮೀರಿದಂತೆಯೆ ಸರಿ. ಬಾಲ್ಯವಿವಾಹದ ಬಗ್ಗೆ ಈ ತೆರನ ಅಭಿಪ್ರಾಯ ಕೇಳಿದ್ದು ಇದೇ ಮೊದಲ ಸಲ. ನನಗೆ ತಿಳಿದಮಟ್ಟಿಗೆ ಹಿಂದೂ ಸಮಾಜ ಸುಧಾರಕರಾಗಲಿ, ಕ್ರೈಸ್ತಧರ್ಮ ಪ್ರಸಾರಕರಾಗಲಿ ಇಂಥ ಅಭಿಪ್ರಾಯ ತಳೆದುದು ನನಗೆ ಕೇಳಿಬಂದಿಲ್ಲ. ಹಾಗಿದ್ದಲ್ಲಿ ವಿಶುದ್ಧಾತ್ಮರೂ, ವಿರೋಧಿಗಳಿಗೂ ಉದಾರತೆ ತೋರುವ ಆದರ್ಶ ವ್ಯಕ್ತಿಗಳೂ ಆದ ಮಹಾತ್ಮಾ ಗಾಂಧಿಯವರ ಲೇಖದಲ್ಲಿ ಈ ವಾಕ್ಯವನ್ನು ಕಂಡಾಗ ನನಗೆಂಥ ವೇದನೆಯಾಯಿತೆಂಬುದನ್ನು ನೀವೇ ಊಹಿಸಿ ನೋಡಿ.

ನೀವು ಒಬ್ಬಿಬ್ಬರನ್ನಲ್ಲ, ಬಹುಶಃ ಎಲ್ಲ ಶಾಸ್ತ್ರಕಾರರನ್ನೂ ಹೀಯಾಳಿಸಿದ್ದೀರಿ. ನನಗೆ ತಿಳಿದಮಟ್ಟಿಗೆ ಬಹುಶಃ ಎಲ್ಲ ಶಾಸ್ತ್ರಕಾರರೂ ಬಾಲ್ಯವಿವಾಹಕ್ಕೆ ಸಮ್ಮತಿಯಿತ್ತಿದಾರೆ. ಆದುದರಿಂದ ಬಾಲ್ಯವಿವಾಹಕ್ಕೆ ಸಂಬಂಧಪಟ್ಟ ಎಲ್ಲ ಶ್ಲೋಕಗಳೂ ತಮ್ಮ ಸೂಚನೆಯಂತೆ ಪ್ರಕ್ಷೇಪವಾದವುಗಳೆಂದು ಭಾವಿಸುವುದು ತಪ್ಪು. ಈ ಬಾಲ್ಯವಿವಾಹಪದ್ಧತಿ ಒಂದು ವರ್ಣಕ್ಕೆ, ಒಂದು ಸೀಮೆಗೆ ಮಾತ್ರ ಸಂಬಂಧಪಟ್ಟುದಲ್ಲ; ಭರತಖಂಡಕ್ಕೆಲ್ಲ ಸಂಬಂಧಿಸಿದೆ. ಅಲ್ಲದೆ ಈ ಪದ್ಧತಿ ಅತಿ ಪ್ರಾಚೀನವಾದುದು. ರಾಮಾಯಣಕಾಲದಿಂದಲೂ ಪರಂಪರಾಗತವಾದುದು

ಸ್ಮೃತಿಕಾರರು ಯಾವ ಸದುದ್ದೇಶದಿಂದ ಬಾಲ್ಯವಿವಾಹದ ಪದ್ಧತಿಗೆ ಅನುಮತಿಯಿತ್ತಿರಬಹುದೆಂಬುದನ್ನು ವಿವರಿಸಿ ಹೇಳಲು ನಾನು ಪ್ರಯತ್ನಿಸುವೆ: ಸರ್ವಸಾಮಾನ್ಯವಾಗಿ ಪ್ರತಿಯೊಬ್ಬ ಹುಡುಗೆಗೂ ಒಬ್ಬ ಗಂಡ ಅವಶ್ಯವೆಂದು ಅವರು ತಿಳಿದರು. ಇದು ಹುಡುಗೆಯರ, ಕಲ್ಯಾಣಕ್ಕಾಗಿ ಮತ್ತು ಮನಃಶಾಂತಿಗಾಗಿ ಮಾತ್ರವಲ್ಲದೆ ಸಾಮಾನ್ಯವಾಗಿ ಸಮಾಜದ ಹಿತಕ್ಕೂ ಭದ್ರತೆಗೂ ಆವಶ್ಯಕ. ಒಬ್ಬ ಹುಡುಗೆಗೊಬ್ಬ ಗಂಡ ಬೇಕೆಂದಾದಲ್ಲಿ ತಂದೆತಾಯಿಗಳೆ ವರಾನ್ವೇಷಣ ಮಾಡಬೇಕಲ್ಲದೆ ಸ್ವತಃ ಹುಡುಗೆಯರಲ್ಲ. ಈ ಆಯ್ಕೆಗೆ ಹುಡುಗೆಯರ ಸಮ್ಮತಿ ಆವಶ್ಯಕವಾದರೆ ಅನೇಕ ಹುಡುಗೆಯರು ಮದುವೆಯಿಲ್ಲದೆ ಉಳಿಯುವರು. ಅದಕ್ಕೆ ಕಾರಣ, ಹುಡುಗೆಯರು ಮದುವೆಗೆ ಒಪ್ಪುವುದಿಲ್ಲವೆಂದಲ್ಲ; ಆದರೆ ಎಲ್ಲ ಹುಡುಗೆಯರಿಗೆ ತಮ್ಮ ಮನಕ್ಕೊಪ್ಪುವ ಗಂಡ ಸಿಗದೆಹೋಗುವುದರಿಂದ ಮೇಲಾಗಿ ಈ ಪದ್ಧತಿ ಅಪಾಯಕರವೂ ಅಹುದು. ಏಕೆಂದರೆ, ಇದರಿಂದ ಹುಡುಗೆಯರಲ್ಲಿ ಬೆಡಗುತನ ಹೆಚ್ಚಿ ನೈತಿಕ ಪತನವಾಗುವ ಭಯವೂ ಉಂಟು. ಮೇಲ್ನೋಟಕ್ಕೆ ಸಭ್ಯರಾಗಿ ತೋರುವ ಯುವಕರು ಸರಳಮನದ ಬಾಲಿಕೆಯರ ಶೀಲವನ್ನು ಕೆಡಿಸಬಹುದು. ಅಲ್ಲದೆ ತಂದೆತಾಯಿಗಳೆ ಮಗಳ ಮದುವೆಯ ಭಾರ ಹೊತ್ತರೆ ಹುಡುಗೆಯ ವಿವಾಹ ಚಿಕ್ಕವಯಸ್ಸಿನಲ್ಲಿಯೆ ಮಾಡುವುದು ಅಗತ್ಯ. ಏಕೆಂದರೆ, ಹುಡುಗೆಯರು ಬೆಳೆದಮೇಲೆ ಅನ್ಯರಲ್ಲಿ ಅನುರಕ್ತರಾಗುವ ಸಂಭವವಿರುವುದರಿಂದ ತಂದೆತಾಯಿಗಳು ನಿಶ್ಚಯಿಸಿದ ವರನನ್ನು ವರಿಸಲು ಒಪ್ಪಲಿಕ್ಕಿಲ್ಲ. ಎಳೆಯ ವಯಸ್ಸಿನಲ್ಲಿ ಹುಡುಗೆಯ ಮದುವೆಯಾದಲ್ಲಿ

ಅವಳು ತನ್ನ ಗಂಡನ ಮತ್ತು ಅವನ ಕುಟುಂಬದೊಂದಿಗೆ ಒಂದಾಗಿ ಹೋಗ ಬಲ್ಲಳು. ಇಂಥ ಸಮಾವೇಶ ಸಹಜವಾದುದು; ಪರಿಪೂರ್ಣವಾದುದು. ಆದರೆ ಪ್ರೌಢ ಬಾಲಿಕೆಯರಲ್ಲಿ ಆಚಾರ-ವಿಚಾರಗಳು ಮೊದಲೆ ಸ್ಥಿರವಾಗಿ ನೈಗೂಡಿಹೋಗಿರುವುದರಿಂದ ಹೊಸ ಕುಟುಂಬದಲ್ಲಿ ಒಂದಾಗಿಹೋಗು ವುದು ಅವರಿಗೆ ಕೆಲಸಲ ಕಷ್ಟಸಾಧ್ಯವಾಗುವುದು

ಹುಡುಗಿಯ ಹಾಗೂ ಅವಳ ಭಾವೀ ಪೀಳಿಗೆಯ ಆರೋಗ್ಯಬಲ ಕುಂದುವುದೆಂಬುದೆ ಬಾಲ್ಯವಿವಾಹಕ್ಕೆ ವಿರೋಧವಾದ ಮುಖ್ಯ ಮುದ್ದೆ. ಆದರೆ ಈ ಕಾರಣ ಅಷ್ಟೊಂದು ಸಮಂಜಸವಾಗಿ ತೋರುವುದಿಲ್ಲ. ಹಿಂದೂ ಜನರಲ್ಲಿ ಮದುವೆಯ ವಯೋಮಾನ ಇತ್ತೀಚೆ ಹೆಚ್ಚುತಿದ್ದರೂ ಅವರ ಪೀಳಿಗೆಮಾತ್ರ ದುರ್ಬಲವಾಗುತಿದೆ. ೫೦-೧೦೦ ವರ್ಷಗಳ ಹಿಂದಿನ ಸ್ತ್ರೀ-ಪುರುಷರು ಸ್ವಾಭಾವಿಕವಾಗಿ ದೃಢಕಾಯರೂ ಆರೋಗ್ಯಶಾಲಿಗಳೂ ಆಗಿದ್ದು ಈಗಿನ ಪೀಳಿಗೆಗಿಂತ ಹೆಚ್ಚುಕಾಲ ಬದುಕುತಿದ್ದರು. ಆದರೆ ಆ ಕಾಲದಲ್ಲಿ ಬಾಲ್ಯವಿವಾಹ ಈಗಿನಕ್ಕಿಂತ ಹೆಚ್ಚು ಪ್ರಚುರವಾಗಿತ್ತು. ಅಲ್ಪ ಶಿಕ್ಷಣ ಪಡೆದು ಎಳೆಯ ವಯಸ್ಸಿನಲ್ಲಿಯೆ ಮದುವೆಯಾದವರಿಗಿಂತ ಸುಶಿಕ್ಷಿತ ರಾಗಿ, ಪ್ರೌಢ ವಯಸ್ಸಿನಲ್ಲಿ ಲಗ್ನವಾದ ಹುಡುಗಿಯರ ಆರೋಗ್ಯ ಬಹುಶಃ ಚೆನ್ನಾಗಿರುವುದಿಲ್ಲ. ಈ ಎಲ್ಲ ಸಂಗತಿಗಳನ್ನು ಪರಿಶೀಲಿಸಿದಲ್ಲಿ ಬಾಲ್ಯ ವಿವಾಹದಿಂದ ಜನ ಊಹಿಸಿದಷ್ಟು ಶಾರೀರಿಕ ದುರ್ಬಲತೆಯುಂಟಾಗುವು ದಿಲ್ಲವೆಂದು ಸ್ಪಷ್ಟವಾಗುವುದು.

ನಿಮಗೆ ಐರೋಪ್ಯ ಮತ್ತು ಹಿಂದೀ ಸಮಾಜಗಳ ಪೂರ್ಣ ಪರಿಚಯ ವುಂಟು. ಆದ್ದರಿಂದ ಐರೋಪ್ಯ ಸ್ತ್ರೀಯರಿಗಿಂತ ಹಿಂದೂ ಸ್ತ್ರೀಯರು ಹೆಚ್ಚು ಪತಿಪರಾಯಣೆಯರಿದ್ದಾರೊ ಇಲ್ಲವೊ; ದಲಿತವರ್ಗದಲ್ಲಿ ಐರೋಪ್ಯ ಪುರುಷರಿಗಿಂತ ಹಿಂದೀಯರು ತಮ್ಮ ಹೆಂಡಂದಿರನ್ನು ಹೆಚ್ಚು ದಯಾದೃಷ್ಟಿ ಯಿಂದ ನೋಡಿಕೊಳ್ಳುವರೊ ಇಲ್ಲವೊ; ಐರೋಪ್ಯ ಸಮಾಜಕ್ಕಿಂತ ಹಿಂದೂ ಸಮಾಜದ ನೈತಿಕಮಟ್ಟ ಮೇಲ್ತರಗತಿಯದಿದೆಯೊ ಅಲ್ಲವೊ ಎಂಬುದನ್ನು ನೀವು ಸಹಜವಾಗಿ ಹೇಳಬಲ್ಲಿರಿ. ಈ ಎಲ್ಲ ದೃಷ್ಟಿಗಳಿಂದ ಪಾಶ್ಚಿಮಾತ್ಯ ವಿವಾಹಪದ್ಧತಿಗಿಂತ ಹಿಂದೂ ವಿವಾಹಪದ್ಧತಿ ಹೆಚ್ಚು ಫಲ

ಶಾಲಿಯಾಗಿದೆ. ಎಂದಮೇಲೆ ಹಿಂದೂ ವಿವಾಹಪದ್ಧತಿಯ ಪ್ರಮುಖ ಲಕ್ಷಣವಾದ ಬಾಲ್ಯವಿವಾಹವನ್ನು ಹಳಿಯುವುದರಲ್ಲಿ ಹುರುಳಿಲ್ಲ.

ಬಾಲ್ಯವಿವಾಹದ ಕಟ್ಟಳೆ ಮಾಡಿದುದರಲ್ಲಿ ಹಿಂದೂ ಶಾಸ್ತ್ರಕಾರರು ಸಮಾಜದ (ಸ್ತ್ರೀ-ಪುರುಷರ) ಕಲ್ಯಾಣದೃಷ್ಟಿಯಲ್ಲದೆ ಅನ್ಯದೃಷ್ಟಿಯಿಟ್ಟು ಕೊಂಡಿದಾರೆ ಎಂಬ ವಿಚಾರಕ್ಕೆ ನಾನು ಸರ್ವಥಾ ಒಪ್ಪಲಾರೆ. ಬಾಲ್ಯ ವಿವಾಹಪದ್ಧತಿ ಹಿಂದೂ ಸಮಾಜದ ಮುಖ್ಯ ಲಕ್ಷಣಗಳಲ್ಲೊಂದಾಗಿದೆ. ಅದು ನಮ್ಮ ಸಮಾಜದ ಪಾವಿತ್ರ್ಯರಕ್ಷಣೆ ಮಾಡಿದುದಲ್ಲದೆ ಪ್ರತಿಕೂಲ ಪರಿಸ್ಥಿತಿಯ ಆಘಾತದಿಂದ ಕುಸಿಬೀಳದಂತೆ ಧರ್ಮವನ್ನು ರಕ್ಷಿಸಿದೆಯೆಂದು ನನ್ನ ವಿಶ್ವಾಸ ನೀವು ಇವುಗಳನ್ನೆಲ್ಲ ಒಪ್ಪಲಿಕ್ಕಿಲ್ಲ. ಆದರೆ ಬಾಲ್ಯ ವಿವಾಹವನ್ನು ಅನುಮೋದಿಸಿದ ಸ್ಮೃತಿಕಾರರೆಲ್ಲರೂ ಆತ್ಮಸಂಯಮ ವನ್ನರಿಯದವರು, ದುಶ್ಚರಿತ್ರರು ಎಂಬ ನಿಮ್ಮ ಅಭಿಪ್ರಾಯವನ್ನು ಬದಲಿಸ ಬೇಕೆಂದು ನಾವು ಬೇಡುವುದೂ ಅಸಂಗತವೆ?

ನೀವು ಉದಾಹರಿಸಿದ ಮದ್ರಾಸಿನ ಘಟನೆ ನಿಜವಾಗಿ ವಿಚಿತ್ರವಾದ ಘಟನೆಯೆ ಸೈ. ಬಾಲಿಕೆ ಆತ್ಮಹತ್ಯೆ ಮಾಡಿಕೊಂಡಿದ್ದಾಳೆಂದು ಪಂಚರ ನಿರ್ಣಯ. ಆದರೆ ಗಂಡನೆ ತನ್ನ ಒಟ್ಟಿಗೆ ಬೆಂಕಿಯಿತ್ತನೆಂದು ಹುಡುಗಿಯ ದೂರು. ಇಂಥ ಬಗೆಹರಿಯದ ಸಮಸ್ಯೆಯಲ್ಲಿ 'ನಿರ್ವಿವಾದವಾದ ಸಂಗತಿ ಇದೇ' ಎಂದು ನಿಮ್ಮಂತೆ ಹೇಳುವುದು ಅತಿ ಕಠಿಣವೇ ಸರಿ. ೧೩ಕ್ಕಿಂತ ಕಡಮೆ ವಯಸ್ಸಿನ ಹುಡುಗೆಯರು ವಿವಾಹವಾದ ಲಕ್ಷೋಪಲಕ್ಷ ಉದಾ ಹರಣೆಗಳಿವೆ. ಆದರೆ ಗಂಡನ ಬಲಾತ್ಕಾರಕ್ಕಾಗಿ ಆತ್ಮಹತ್ಯೆ ಮಾಡಿಕೊಂಡ ಒಂದು ಘಟನೆಯೂ ಈವರೆಗೆ ಕೇಳಿಬಂದಿಲ್ಲ. ಮದ್ರಾಸಿನ ಈ ಘಟನೆಗೆ ಬೇರೆ ಏನಾದರೂ ಕಾರಣವಿರಬಹುದು. ಆದಕ್ಕೆ ಬಾಲ್ಯವಿವಾಹ ಮುಖ್ಯ ಕಾರಣವಲ್ಲ."

"ನಿಗೂಢವಾಗಿ ಮನವನ್ನು ಕೊರೆಯುವಂತಹ ಸಂಗತಿಗಳ ಕಠೋರತೆಯ ಉಪಶಮನಾರ್ಥವಾಗಿ ಹೊಸ ಸಿದ್ಧಾಂತದ ನಿರ್ಮಾಣ ಅತಿ ಸುಲಭ" ವೆಂದು ಕವಿಗಳೊಬ್ಬರು ಬರೆದಿದಾರೆ.

'ಯಂಗ್ ಇಂಡಿಯ'ದ ಈ ಓದುಗರು ಈ ತತ್ವಕ್ಕಿಂತಲೂ ಒಂದು

ಹೆಚ್ಚು ಮುಂದೆ ಹೋಗಿದ್ದಾರೆ. ತಕ್ಕುದಾದ ಹೊಸ ಸಿದ್ಧಾಂತವೊಂದನ್ನು ನಿರ್ಮಿಸಿದರಲ್ಲದೆ ಸಂಭವಿಸಿದ ಘಟನೆಗಳನ್ನು ಲಕ್ಷಿಸಿ ಆಧಾರವಿಲ್ಲದ ಹೇಳಿಕೆಗಳ ಮೇಲೆ ತಮ್ಮ ಮಾತನ್ನು ಸ್ಥಾಪಿಸಹೊರಟಿದ್ದಾರೆ.

ನನ್ನಲ್ಲಿ ಔದಾರ್ಯವಿಲ್ಲವೆಂಬ ಆರೋಪಕ್ಕೆ ನಾನು ಉತ್ತರವೀಯುವ ಆವಶ್ಯಕತೆಯಿಲ್ಲ ಏಕೆಂದರೆ, ನಾನು ಸ್ಮೃತಿಕಾರರನ್ನು ದೂಷಿಸಿಲ್ಲ. ತಾಯಿತನದ ಭಾರ ಹೊರಲು ತೀರ ಅಶಕ್ತರಾದ ಎಳೆಯ ಬಾಲಿಕೆಯರ ಮದುವೆಯಾಗಲೇಬೇಕೆಂದು ಹಟದಿಂದ ವಾದಿಸುವ ಜನರ ಮೇಲೆ ನಾನು ದೋಷಾರೋಪಣೆ ಮಾಡಿದ್ದು ನಿಜ ಜೀವಂತ ವ್ಯಕ್ತಿಗಳ ಮೇಲೆ, ಅದೂ ಸಹ ಹೇಯ ದೃಷ್ಟಿಯಿಂದ ಅಕಾರಣವಾಗಿ ಜರಿದರೆ ಮಾತ್ರ, ಅನೌದಾರ್ಯದ ಆರೋಪ ಮಾಡಬಹುದಲ್ಲದೆ ಕಾಲ್ಪನಿಕ ವ್ಯಕ್ತಿಗಳ ವಿಷಯವಾಗಿ ಆ ಪ್ರಶ್ನೆ ತಲೆಯೆತ್ತುವುದೇ ಇಲ್ಲ. ಆತ್ಮಸಂಯಮವನ್ನು ಶ್ಲಾಘಿಸಿದ ಸ್ಮೃತಿಕಾರರೆ ಹಸುಳೆಯರ ಮದುವೆಗೆ ಸಮ್ಮತಿಸುವ ಶ್ಲೋಕಗಳನ್ನು ಬರೆದಿದಾರೆಂದು ಪ್ರಮಾಣಿಸಿಕೊಡುವ ಆಧಾರಗಳನ್ನು ಈ ಪತ್ರಲೇಖಕರು ತೋರಿಸಬಲ್ಲರೊ? ಪೂಜ್ಯ ಋಷಿಗಳು ಮಾನವನ ಶಾರೀರಿಕ ಬೆಳವಣಿಗೆಯಂಥ ಪ್ರಮುಖ ಸಂಗತಿಯ ಬಗ್ಗೆ ಅಜ್ಞಾನಿಗಳಲ್ಲವೆಂದೂ ಅವರ ಮನಸ್ಸು ದೂಷಿತವಿರುವುದು ಅಸಾಧ್ಯವೆಂದೂ ನಾನು ಭಾವಿಸಿದುದು ಔದಾರ್ಯದ ಲಕ್ಷಣವಲ್ಲವೆ?

ಬಾಲ್ಯವಿವಾಹಕ್ಕೆ (ಬಾಲ್ಯವಿವಾಹವೆಂದರೆ ೨೫ ವರ್ಷ ವಯಸ್ಸಿಗಿಂತ ಮೊದಲೆಂಬ ಅರ್ಥ) ಒಪ್ಪಿಗೆ ಕೊಡುವಂಥ ಅನೇಕ ಶ್ಲೋಕಗಳನ್ನು ಪ್ರಮಾಣಿಸಿ ಕೊಡಬಹುದು. ಆದರೂ ಅದನ್ನು ಆಧುನಿಕ ಶಾಸ್ತ್ರೀಯ ಜ್ಞಾನ ಮತ್ತು ಅನುಭವಗಳ ದೃಷ್ಟಿಯಿಂದ ಅನಿಷ್ಟವೆಂದು ತಿಳಿದು ತ್ಯಜಿಸಬೇಕು. ಬಾಲ್ಯವಿವಾಹ ಹಿಂದೂಧರ್ಮದಲ್ಲಿ ಸಾರ್ವತ್ರಿಕವಾಗಿದೆಯೆಂಬ ಹೇಳಿಕೆಯಲ್ಲಿ ಎಷ್ಟು ಸತ್ಯಾಂಶವಿದೆಯೆಂದು ಲೇಖಕರು ಪ್ರಮಾಣಿಸಿ ಕೊಡಬಲ್ಲರೊ? ಲಕ್ಷೋಪಲಕ್ಷ ಬಾಲಿಕೆಯರು ಮದುವೆಯಾಗುವರು, ಎಂದರೆ ಇನ್ನೂ ಚಿಕ್ಕ ಮಕ್ಕಳೆ ಆಗಿರುವಾಗ ಗೃಹಿಣೀಪದವನ್ನು ಪಡೆಯುವರೆಂಬುದನ್ನು ನೆನೆದು ನನಗೆ ಅತೀವ ವೇದನೆಯಾಗುತ್ತಿದೆ. ಹನ್ನೊಂದು ವರ್ಷದವರಿರುವಾಗಲೆ ಲಕ್ಷೋಪಲಕ್ಷ ಹುಡುಗಿಯರು ವಿವಾಹವಾಗಿ ಪತ್ನೀ

ಜೀವನ ಸಾಗಿಸುತ್ತಿದ್ದರೆ ಹಿಂದೂಧರ್ಮ ನಾಮಶೇಷವಾಗಿ ಹಳೆಯಕಾಲ ವಾಗುತಿತ್ತು.

ತಂದೆತಾಯಿಗಳೆ ತಮ್ಮ ಹೆಂಣುಮಕ್ಕಳಿಗೆ ವರಶೋಧನೆ ಮಾಡ ಬೇಕಾದಲ್ಲಿ ಮದುವೆಯನ್ನು ಬೇಗನೆ ನಿಶ್ಚಯಿಸಿ ಪೂರೈಸಿಬಿಡಬೇಕೆಂಬ ಮಾತಿನಲ್ಲಿ ಹುರುಳಿಲ್ಲ. ಸ್ವತಃ ಹುಡುಗೆಯರೆ ವರಶೋಧನೆ ಮಾಡುವು ದಾದರೆ ವಿಲಾಸದ ಬೆಡಗಿಗೆ ಈಡಾಗುವರೆಂಬುದರಲ್ಲಿಯೂ ತಥ್ಯವಿಲ್ಲ. ಯುರೋಪಿನಲ್ಲಿಯೂ Courtship ಸಾರ್ವತ್ರಿಕವಾಗಿಲ್ಲ. ಅಲ್ಲದೆ ಭಾರತ ದಲ್ಲಿಯೂ ೧೫ ವರ್ಷ ಮಿಕ್ಕಿದ ಎಷ್ಟೊ ಹುಡುಗೆಯರ ಮದುವೆಗಳಾಗುತ್ತಿವೆ. ಅವರ ತಂದೆತಾಯಂದಿರೆ ಅವರ ವರರನ್ನು ನಿಶ್ಚಯಿಸುತ್ತಾರೆ. ಮುಸಲ್ಮಾನ ರಲ್ಲಿ ತಮ್ಮ ಪ್ರೌಢ ಹೆಂಣುಮಕ್ಕಳಿಗೆ ವರನಿಶ್ಚಯ ಮಾಡುವವರು ತಂದೆ ತಾಯಿಯರು ವರನಿಶ್ಚಯ ಮಾಡುವುದು ಹುಡುಗೆಯೋ ತಂದೆತಾಯಿ ಗಳೋ ಎಂಬ ಪ್ರಶ್ನೆಯೆ ಬೇರೆ. ಅದು ಸಂಪ್ರದಾಯಕ್ಕೆ ಸಂಬಂಧಪಟ್ಟುದು.

ಬಾಲ್ಯವಿವಾಹಿತರ ಸಂತತಿಗಿಂತ ಪ್ರೌಢ ವಿವಾಹಿತರ ಸಂತತಿ ಸಾಮಾನ್ಯವಾಗಿ ನಿರ್ಬಲವೆಂಬ ಬಗೆಗೆ ಲೇಖಕರು ಯಾವ ಪ್ರಮಾಣವನ್ನೂ ತೋರಿಸಿಲ್ಲ ಭಾರತೀಯ ಹಾಗೂ ಐರೋಪ್ಯ ಸಮಾಜಿಕ ಸ್ಥಿತಿಯನ್ನು ನಾನು ಚೆನ್ನಾಗಿ ಬಲ್ಲೆನಾದರೂ ಅವುಗಳ ನೈತಿಕ ತುಲನೆಯ ಚರ್ಚೆಯಲ್ಲಿ ತೊಡಗುವುದು ನನಗೆ ಇಷ್ಟವಿಲ್ಲ ಆದರೆ, ಐರೋಪ್ಯ ಸಮಾಜದ ನೈತಿಕ ಮಟ್ಟ ಭಾರತೀಯ ಸಮಾಜಕ್ಕಿಂತ ಕೀಳೆಂದು ಈ ವಿವಾದದ ಮಟ್ಟಿಗೆ ಒಪ್ಪಿಕೊಂಡರೂ, ಪ್ರೌಢ ವಯಸ್ಸಿನಲ್ಲಿ ಹುಡುಗೆಯರು ಮದುವೆಯಾಗು ವುದೆ ಆ ಹೀನತೆಗೆ ಕಾರಣವೆಂದು ಸ್ಥಿರಪಡಿಸಿದಂತಾಗುವುದೆ?

ಕೊನೆಯಮಾತು :- ಮದ್ರಾಸಿನ ಘಟನೆಯಿಂದ ಲೇಖಕರಿಗೆ ಯಾವ ಸಹಾಯವೂ ಆಗಲಿಲ್ಲ. ಆದರೂ ಅವರು ನಡೆದ ಸಂಗತಿಗಳನ್ನೆಲ್ಲ ಅಲಕ್ಷಿಸಿ ತಮ್ಮ ತೀರ್ಪನ್ನೆ ಮುಂದಿಡಲು ಅದರ ಉಪಯೋಗಮಾಡಿಕೊಂಡಿದ್ದಾರೆ. ನನ್ನ ಲೇಖವನ್ನು ಪುನಃ ಪರಿಶೀಲಿಸಿದಲ್ಲಿ ನಾನಿತ್ತ ತೀರ್ಪು ಸಾಧಾರವಾದು ದೆಂದು ಅವರು ಕಂಡುಕೊಳ್ಳಬಹುದು. ನನ್ನ ನಿರ್ಣಯಗಳಿಗೂ ಸಾವಿನ ಕಾರಣಕ್ಕೂ ಸಂಬಂಧವೇ ಇಲ್ಲ. (೧) ಹುಡುಗೆ ಎಳೆಯ ವಯಸ್ಸಿನವಳು

(೨) ಅವಳಿಗೆ ಸಂಭೋಗದ ಇಚ್ಛೆ ಇರಲಿಲ್ಲ (೩) ಗಂಡ ಅವಳ ಮೇಲೆ ಬಲಾತ್ಕಾರ ಮಾಡಿದಾನೆ (೪) ಈಗ ಅವಳು ಇಹಲೋಕದಲ್ಲಿಲ್ಲ. ಈ ಸಂಗತಿಗಳೆಲ್ಲವೂ ಈಗಾಗಲೆ ಪ್ರಮಾಣಿತವಾಗಿವೆ. ಹುಡುಗೆ ಆತ್ಮಹತ್ಯೆ ಮಾಡಿಕೊಂಡದ್ದು ನಿಜವಾದರೆ ಆದು ನಿಜವಾಗಿ ಶೋಚನೀಯವಾದುದು. ಆದರೆ ತನ್ನ ಕಾಮುಕತನಕ್ಕೆ ವಶಳಾಗಲಿಲ್ಲವೆಂದು ಗಂಡ ಅವಳ ಬಲಿ ತೆಗೆದುಕೊಂಡಿದ್ದರೆ ಅದು ಲಜ್ಜಾಸ್ಪದವಾದುದು. ಈ ಬಾಲಿಕೆ ಕೇವಲ ಆಟ-ಪಾಠಗಳಿಗೆ ಯೋಗ್ಯಳಿದ್ದಳಲ್ಲದೆ ಹೆಂಡತಿಯಾಗಿ ತನ್ನ ಎಳೆದೋಳ್ಗಳ ಮೇಲೆ ಗೃಹಭಾರವನ್ನೂ ಗಂಡನ ಪ್ರಭುತ್ವದ ನೊಗವನ್ನೂ ಹೊರಲು ಯೋಗ್ಯಳಿದ್ದಿಲ್ಲ.

ನಮ್ಮ ಪತ್ರಲೇಖಕರು ಸಮಾಜದ ಪ್ರತಿಷ್ಠಿತ ವ್ಯಕ್ತಿಗಳಲ್ಲೊಬ್ಬರು. ದೇಶದಅಭ್ಯುದಯದ ವಿಚಾರಮಾಡಲು ಅರ್ಹರಾದ ತನ್ನ ಸುಶಿಕ್ಷಿತ ಮಕ್ಕಳಿಂದ ಇನ್ನೂ ಹೆಚ್ಚಿನ ಕಾರ್ಯಗಳಾಗಲೆಂದು ಭಾರತಮಾತೆ ಇಚ್ಛಿಸುತ್ತಾಳೆ. ನಮ್ಮಲ್ಲಿ ಸಾಮಾಜಿಕ, ರಾಜಕೀಯ, ನೈತಿಕ, ಆರ್ಥಿಕ ಎಲ್ಲ ದೃಷ್ಟಿಯಿಂದಲೂ ಅನೇಕ ದೋಷಗಳಿವೆ. ಅವುಗಳ ವಿಷಯದಲ್ಲಿ ಶಾಂತ ವ್ಯಾಸಂಗ, ಸೂಕ್ಷ್ಮ ಸಂಶೋಧನೆ, ಕುಶಲಕಾರ್ಯ, ಅಚ್ಚುಕಟ್ಟಾದ ವಿವರಣೆ, ಸ್ಪಷ್ಟವಿಚಾರ—ಎಲ್ಲಕ್ಕೂ ಮುಖ್ಯವಾಗಿ ವಿವೇಕಯುಕ್ತ ನಿಷ್ಪಕ್ಷಪಾತ ನಿರ್ಣಯ ಅವಶ್ಯ ಬೇಕು. ಆ ಬಳಿಕ ನಮ್ಮನಮ್ಮಲ್ಲಿ ಪೂರ್ವ ಪಶ್ಚಿಮದಷ್ಟು ಭಿನ್ನಾಭಿಪ್ರಾಯವಾದರೂ ಪರವಿಲ್ಲ. ಸತ್ಯಶೋಧನೆ ಮಾಡದೆಹೋದರೆ, ಎಂಥ ಗಂಡಾಂತರ ಬಂದರೂ ಸತ್ಯಕ್ಕೆ ಅಂಟಿಕೊಳ್ಳದಿದ್ದರೆ, ನಾವು ನಮ್ಮ ದೇಶವನ್ನು, ನಮ್ಮ ಧರ್ಮವನ್ನು ಹಾಗೂ ನಮ್ಮ ರಾಷ್ಟ್ರವನ್ನು ಹಾಳು ಮಾಡಿದಂತೆಯೆ ಸರಿ.

**ಯಂಗ್ ಇಂಡಿಯಾ, ೯-೯-೧೯೨೬**

# "ಆದರ್ಶ ಸತಿ"

[ ಸತೀತ್ವವು ಪವಿತ್ರತೆಯ ಪರಾಕಾಷ್ಠೆ. ಈ ಪಾವಿತ್ರ್ಯವನ್ನು ಆತ್ಮಹತ್ಯೆಯಿಂದ ಪಡೆವುದು ಸಾಧ್ಯವಿಲ್ಲ ಸ್ಥಿರಪ್ರಯತ್ನದಿಂದ, ನಿಶ್ಚಲ ಆತ್ಮತ್ಯಾಗದಿಂದಲೆ ಸಾಧ್ಯ. ]

ಒಬ್ಬ ಸ್ತ್ರೀ ಸತಿಹೋದಳೆಂದು ಮುಂಬಯಿ ಪತ್ರಿಕೆಯೊಂದರಲ್ಲಿ ವರದಿಯಾಗಿದ್ದರ ಬಗೆಗೆ ಅಭಿಪ್ರಾಯ ತಿಳಿಸಬೇಕೆಂದು ಗಾಂಧೀಜಿಯವರನ್ನು ಪತ್ರಲೇಖಿಕೆಯರೊಬ್ಬರು ಬಿನ್ನವಿಸಿಕೊಂಡಿದ್ದರು. ಆ ವಿಷಯವಾಗಿ ಗಾಂಧೀಜಿಯವರು 'ನವಜೀವನ' ದಲ್ಲಿ ಬರೆದ ತಮ್ಮ ಅಭಿಪ್ರಾಯ ಹೀಗಿದೆ :—

" ಮುಂಬಯಿ ಪತ್ರಿಕೆಯಲ್ಲಿ ಪ್ರಕಟವಾದ ಸುದ್ದಿಯು ಸತ್ಯವಲ್ಲವೆಂದು ನನ್ನ ಅಭಿಪ್ರಾಯ. ಆ ಹುಡುಗಿ ಬೇರೆ ಇಲ್ಲವೆ ಅಪಘಾತದಿಂದ ಮರಣ ಹೊಂದಿದಳಲ್ಲದೆ ಆತ್ಮಹತ್ಯೆಯಿಂದಲ್ಲವೆಂದು ನನ್ನ ಮತ. ನಮ್ಮ ಪೂರ್ವಜರು ಸತಿಯ ಲಕ್ಷಣಗಳನ್ನು ವಿವರಿಸಿದಾರೆ. ಅವು ಇಂದಿಗೂ ಅನ್ವಯಿಸುವವು. ಗಂಡನ ಜೀವಿತಕಾಲದಲ್ಲೂ, ತದನಂತರದಲ್ಲೂ ನಿಃಸ್ವಾರ್ಥಸೇವೆಗೈಯುವುದೆ ನಿಜವಾದ ಸತಿಯ — ಪತಿಪರಾಯಣೆಯ, ಭಕ್ತಿಪರಾಯಣೆಯ — ಜೀವನದ ವೈಶಿಷ್ಟ್ಯ. ಅವಳು ಯಾವಾಗಲೂ ಕಾಯಾ, ವಾಚಾ, ಮನಸಾ, ಸುಶೀಲಳು; ಪವಿತ್ರಳು. ಹೆಂಡತಿ ಗಂಡನೊಂದಿಗೆ ಸತಿಹೋಗುವುದು ಬುದ್ಧಿಮತ್ತೆಯ ಲಕ್ಷಣವಲ್ಲ; ಆತ್ಮನ ವಿಷಯದಲ್ಲಿ ಅವಳಿಗಿದ್ದ ಅಜ್ಞಾನದ ಕುರುಹು. ಆತ್ಮ ಅಮರವಾದುದು, ಅಚಲವಾದುದು, ಅಂತರ್ಭೂತವಾದುದು. ಈ ಭೌತಿಕದೇಹದೊಂದಿಗೆ ಆತ್ಮವೂ ನಾಶಹೊಂದಲಾರದು. ಈ ಪ್ರಾಪಂಚಿಕ ಬಂಧನದಿಂದ ಮುಕ್ತವಾಗುವ ವರೆಗೆ ಅದು ಒಂದು ಭೌತಿಕ ಕಟ್ಟೆನಿಂದ ಮತ್ತೊಂದು ಕಟ್ಟೆಗೆ ಪಯಣ ಬೆಳೆಸುವುದು. ಹಲವು ಋಷಿಗಳು, ದರ್ಶನಕಾರರು ತಮ್ಮ ಅನುಭವದಿಂದ ಈ ಸತ್ಯವನ್ನು ಪ್ರಮಾಣಿಸಿ ಕೊಟ್ಟಿದಾರೆ. ಸತ್ಯದರ್ಶನಾಪೇಕ್ಷಿಗಳು ಅದನ್ನು ಈಗಲೂ ಅನುಭವಿಸ

ಬಹುದು. ಆತ್ಮಹತ್ಯೆ ನ್ಯಾಯವೆಂದು ಈ ಸಂಗತಿಗಳ ಅನುಭವದಿಂದ ಸಿದ್ಧವಾಗುವುದಿಲ್ಲ. ನಿಜವಾದ ವಿವಾಹವೆಂದರೆ ಶಾರೀರಿಕ ಬಂಧನಮಾತ್ರ ವಲ್ಲ; ಆತ್ಮಗಳ ಬಂಧನವೂ ಅಹುದು. ಮದುವೆ ಶಾರೀರಿಕ ಬಂಧನವಷ್ಟೆ ಇದ್ದರೆ, ವಿಧವೆ ತನ್ನ ಗಂಡನ ಛಾಯಾಚಿತ್ರದಿಂದಾಗಲಿ ಇಲ್ಲವೆ ಅವನ ಮೇಣದ ಪ್ರತಿಮೆಯಿಂದಾಗಲಿ ಸಮಾಧಾನಗೊಳ್ಳಬೇಕಲ್ಲವೆ ? ಆತ್ಮಹತ್ಯೆ ವ್ಯರ್ಥಮಾತ್ರವಲ್ಲ ; ಅತ್ಯಂತ ಹಾನಿಕರವೂ ಅಹುದು. ಅದು ಸತ್ತವರನ್ನು ಬದುಕಿಸುವುದಿಲ್ಲ, ಆದರೆ ಈ ವಿಶ್ವದ ಇನ್ನೊಂದು ಜೀವವನ್ನು ಕೊಂಡು ಹೋಗುತ್ತದೆ.

ಶಾರೀರಿಕ ಕೂಟದ ಮುಖಾಂತರ ಪಾರಮಾರ್ಥಿಕ ಕೂಟಕ್ಕೆಳೆಸುವುದೆ ವಿವಾಹದ ಮುಖ್ಯ ಉದ್ದೇಶ. ಆ ಮೂಲಕ ಮೂರ್ತೀಕರಿಸಿದ ಮಾನವ ಪ್ರೇಮವು ವಿಶ್ವಪ್ರೇಮಕ್ಕೆಳೆಯುವ ಪ್ರಥಮ ಸೋಪಾನವಾಗುವುದು. ಅಮರಳಾದ ಮೀರಾಬಾಯಿಯು " ಪರಮೇಶ್ವರನೇ ನನ್ನ ಪತಿ, ಬೇರೊಬ್ಬ ನಲ್ಲ " ಎಂದು ಉಸುರಿದ್ದು ಅದಕ್ಕೇ.

ಇದರಿಂದ ಕಂಡುಬರುವುದಿಷ್ಟೆ—ನಿಜವಾದ ಸತಿಯು ಮದುವೆಯೆಂದರೆ ವಿಷಯವಾಸನೆಯನ್ನು ತೃಪ್ತಿಗೊಳಿಸುವ ಸಾಧನವೆಂದು ತಿಳಿಯಬಾರದು. ವಿವಾಹಬಂಧನವು ಅವಳಿಗೆ ತನ್ನ ಗಂಡನಲ್ಲಿ ತಾದಾತ್ಮ್ಯಹೊಂದಿ ನಿಸ್ವಾರ್ಥತೆ ಯಿಂದ ಪರಹಿತ ಸೇವೆಗೈಯುವ ಸಾಧನವಾಗಬೇಕು. ಗಂಡನ ಮರಣಾ ನಂತರ ಅವನ ಚಿತೆಯನ್ನೇರಿದರೆ ಅವಳು ತನ್ನ ಸತೀತ್ವವನ್ನು ಪ್ರದರ್ಶಿಸಿ ದಂತಾಗುವುದಿಲ್ಲ. ಸಪ್ತಪದಿ ಸಮಾರಂಭದಲ್ಲಿ ಗಂಡನಿಗೆ ಭರವಸೆ ಕೊಟ್ಟ ದಿನದಿಂದಲೆ ಅವಳು ತ್ಯಾಗ ಹಾಗೂ ಬಲಿದಾನಗಳ ಮೂಲಕ ತನ್ನ ಪತಿಯ, ತನ್ನ ಕುಟುಂಬದ, ತನ್ನ ರಾಷ್ಟ್ರದ ಸೇವೆಗಾಗಿ ಆತ್ಮಾರ್ಪಣೆಮಾಡಿ ಸತೀತ್ವವನ್ನು ವಿಶ್ವಕ್ಕೆ ಬೀರುವಳು. ಮಕ್ಕಳ ಬಯಕೆಯಿಂದ ಮೊದಲಿಸಿ ಇಂದ್ರಿಯಜನ್ಯ ಸುಖಗಳನ್ನೆಲ್ಲ ಅವಳು ತ್ಯಜಿಸುವಳು. ತನ್ನ ಕುಟುಂಬದ ಹಿತಸಂಬಂಧ, ತನ್ನ ಮನೆ-ಮಠಗಳ ಚಿಂತೆ ಮುಂತಾದ ಸಂಕುಚಿತ ದೃಷ್ಟಿಗೆ ಗುಲಾಮಳಾಗಿ ಬಾಳಲು ಒಪ್ಪಲಾರಳು. ಮಾತ್ರವಲ್ಲ, ಆತ್ಮ ಸಂಯಮನ, ಆತ್ಮತ್ಯಾಗಗಳನ್ನು ದಿನಂದಿನ ಬೆಳೆಸಿ, ಸೇವೆಗೈಯುವ ತನ್ನ ಶಕ್ತಿಯನ್ನು ಹೆಚ್ಚಿಸಿಕೊಳ್ಳುವಳು. ದೊರೆತ ಸಂದರ್ಭಗಳಿಂದ ಅನುಭವ

ಪಡೆದು ತನ್ನ ಜ್ಞಾನಭಾಂಡಾರವನ್ನು ವರ್ಧಿಸಿಕೊಳ್ಳುವಳು; ಮತ್ತು ಗಂಡನೊಂದಿಗೆ ಏಕಾತ್ಮಳಾಗಿ, ಈ ವಿಶ್ವದೊಂದಿಗೆ ತಾದಾತ್ಮ್ಯಳಾಗಲು ಕಲಿಯುವಳು.

ಇಂಥ ಸತಿಯು ಪತಿಯ ಮರಣಕಾಲದಲ್ಲಿ ಶೋಕಕ್ಕೆಡೆಗೊಡುವುದಿಲ್ಲ. ತನ್ನ ದಿವಂಗತ ಪತಿಯ ಸದ್ಗುಣ, ಆದರ್ಶಗಳನ್ನೆಲ್ಲ ಕೃತಿಗಳಲ್ಲಿ ರೂಪಿಸಲು ಬಹುಮುಖೇನ ಪ್ರಯತ್ನಿಸಿ ಅವನಿಗಾಗಿ ಅಮರತ್ವವನ್ನು ದೊರೆಕಿಸುವಳು. ಪತಿಯ ಭೌತಿಕ ಶರೀರ ನಾಶವಾಗಿದ್ದರೂ ಆತನ ಆತ್ಮಕ್ಕೆ ವಿನಾಶವಿಲ್ಲವೆಂದು ಅರಿತ ಅವಳು ಪುನರ್ವಿವಾಹದ ಯೋಚನೆಯನ್ನೆ ಮಾಡಳು.

ಓದುಗರು ಇಲ್ಲಿ ಒಂದು ಪ್ರಶ್ನೆ ಕೇಳಬಹುದು: " ಲಾಲಸೆ ಅಥವಾ ವಿಷಯವಾಸನೆಯಿಂದ ನಿರ್ಲಿಪ್ತಳಾದ ಸತಿಯ ಚಿತ್ರವನ್ನು ತಾವಿಲ್ಲಿ ಚಿತ್ರಿಸಿದೀರಿ. ಅವಳಿಗೆ ಮಕ್ಕಳ ಬಯಕೆಯು ಇರಲಾರದು. ಎಂದಮೇಲೆ ಅವಳಿಗೇಕೆ ಪುನರ್ವಿವಾಹ?" ಎಂದು. ಅದಕ್ಕೆ ನನ್ನ ಉತ್ತರವಿಷ್ಟೆ — ಈಗಿನ ನಮ್ಮ ಹಿಂದೂ ಸಮಾಜದಲ್ಲಿ ಆಗುವ ಮದುವೆಗಳಲ್ಲಿ ಬಹ್ವಂಶ ಮದುವೆಗಳು ವಧೂ-ವರರ ಪೂರ್ವಸಮ್ಮತಿಯಿಂದ ಆಗಿರುವುದಿಲ್ಲ. ಅಲ್ಲದೆ ಈ ಕಲಿಯುಗದಲ್ಲಿ ಆತ್ಮಸಂಯಮನ ಹಾಗೂ ಶೀಲದ ರಕ್ಷಣಾರ್ಥವಾಗಿ ವಿವಾಹ ಅತ್ಯಗತ್ಯವೆಂದು ಕೆಲವರ ಅಭಿಪ್ರಾಯ. ಸತ್ಯ ಹೇಳುವುದಾದರೆ, ಎಷ್ಟೋ ಜನ ಮದುವೆಯ ಸಮಯದಲ್ಲಿ ಪಾಶವೀವಾಸನೆಯಿಂದ ಆಲಿಪ್ತರಾಗಿದ್ದರೂ ಅನಂತರ ಆತ್ಮಸಂಯಮನದ ಆದರ್ಶದಿಂದ ಪುಲಕಿತರಾಗಿ ಆ ಗುರಿ ಸಾಧಿಸಲು ದಾಂಪತ್ಯಜೀವನವನ್ನು ಒಂದು ಸಾಧನವನ್ನಾಗಿ ಮಾಡಿಕೊಂಡ ಎಷ್ಟೊ ಉದಾಹರಣೆಗಳನ್ನು ನಾನು ಬಲ್ಲೆ. ನಾನು ಚಿತ್ರಿಸಿದ ಸತಿಯ ಆದರ್ಶಲಕ್ಷಣ ಕೇವಲ ಕಾಲ್ಪನಿಕ ಜಗತ್ತಿನಲ್ಲಿ ಸಾಧಿಸಲರ್ಹವೆಂದು ಭಾವಿಸಬೇಡಿರಿ. ವಾಸ್ತವಿಕ ಜಗತ್ತಿನಲ್ಲಿಯೆ ಅದನ್ನು ಸಾಧಿಸಬಲ್ಲೆವೆಂದು ತೋರಲು ನನ್ನ ಈ ಉದಾಹರಣೆ. ಈ ಆದರ್ಶಸಾಧನೆಗಾಗಿ ನಾವು ನಿತ್ಯವೂ ಹೋರಾಡಿ ಈ ವಾಸ್ತವಿಕ ಜಗತ್ತಿನಲ್ಲಿಯೆ ಅದನ್ನು ಆರ್ಜಿಸಬೇಕು.

ಸತಿಯ ಆದರ್ಶವನ್ನು ಗುರಿಯಾಗಿಟ್ಟುಕೊಂಡು ಹವಣಿಸುವ ಪತ್ನಿಯು, ತಾಯಿಯೂ ಆಗಬಹುದೆಂದು ನಾನು ಒಪ್ಪುವೆ. ಅವಳು ತನ್ನ

ಜ್ಞಾನಭಾಂಡಾರಕ್ಕೆ ಮಕ್ಕಳನ್ನು ಹೆರುವ,—ಆರೈಕೆಮಾಡುವ, ಅವರನ್ನು ತಿದ್ದುವ ಜ್ಞಾನವನ್ನು ಸೇರಿಸಿಕೊಳ್ಳಬೇಕು. ಎಂದರೆ ಮಕ್ಕಳು ರಾಷ್ಟ್ರದ ನಿಜವಾದ ಸೇವಕರಾಗುವರು.

ನಾನು ಆದರ್ಶಪತ್ನಿಯ ವಿಷಯವಾಗಿ ಹೇಳಿದುದೆಲ್ಲವೂ ಪತಿಗೂ ಅನ್ವಯಿಸುವುದು. ಪತ್ನಿಯು ಪತಿಪರಾಯಣೆ, ಸ್ವಾಮಿನಿಷ್ಠೆಯಾಗಿರ ಬೇಕೆಂದು ಹೇಳಿದರೆ, ಪತಿಯೂ ಪತ್ನಿಯಲ್ಲಿ ಏಕನಿಷ್ಠೆ, ಅನುರಾಗವಿದ ಬೇಕೆಂದೂ ಹೇಳುವೆ. ತಕ್ಕಡಿಯ ಒಂದು ಪರಡಿಯಲ್ಲಿ ಒಂದು ತೂಕ, ಮತ್ತೊಂದರಲ್ಲಿ ಬೇರೊಂದು ತೂಕವಿಡಲಾರಿರಿ. ಇದು ನಿಜವಿದ್ದರೂ, ಗಂಡನು ಹೆಂಡತಿಯ ಚಿತೆಯನೇರಿದ ಒಂದು ಘಟನೆಯನ್ನೂ ನಾವು ಇದು ಪರೆಗೆ ಕೇಳಿಲ್ಲ. ಗಂಡನ ಮರಣಾನಂತರ ಆತನ ವಿಧವೆ ಸತಿಹೋಗುವ ರೂಢಿ ಗಂಡಸಿನ ಸ್ವಾರ್ಥಪರತೆಯ, ಅಹಂಕಾರದ ಮತ್ತು ಹೆಂಗುಸಿನ ಅಜ್ಞಾನದ, ಕುರುಡು ನಂಬುಗೆಯ ಫಲ ಒಂದಾನೊಂದು ಕಾಲದಲ್ಲಿ ಈ ರೂಢಿಗೆ ಒಂದು ಅರ್ಥವಿತ್ತೆಂದು ಪ್ರಮಾಣಿಸಿಕೊಟ್ಟರೂ ಈ ಕಾಲದಲ್ಲಿ ಅದು ಕೇವಲ ಕಾಡುಪದ್ಧತಿಯೆಂದೆ ಗಣಿಸಲ್ಪಡುವುದು. ಹೆಂಡತಿ ಗಂಡನ ತೊತ್ತಲ್ಲ; ಅವನ ಒಡನಾಡಿ, ಅವನ ಅರ್ಧಾಂಗಿನಿ, ಮೈತ್ರಿಣಿ; ಕರ್ತವ್ಯ ಕರ್ಮಗಳಲ್ಲಿ, ಹಕ್ಕುಬಾಧ್ಯತೆಗಳಲ್ಲಿ ಅವನ ಸಮಪಾಲುಗಾರ್ತಿಯವಳು. ಗಂಡ-ಹೆಂಡಿರ ಋಣಾನುಬಂಧ, ತನ್ಮೂಲಕ ವಿಶ್ವದ ಋಣಾನುಬಂಧ ಸಮನಾಗಿರಬೇಕು, ಅನ್ಯೋನ್ಯವಾಗಿರಬೇಕು.

ಆದುದರಿಂದಲೆ ಈ ತಂಗಿಯು ವ್ಯರ್ಥವಾಗಿ ಆತ್ಮಹತ್ಯೆ ಮಾಡಿ ಕೊಂಡಳೆಂದು ನನ್ನ ಅಭಿಪ್ರಾಯ. ಇದು ಅನುಕರಣೀಯವಾದ ಉದಾ ಹರಣೆಯಲ್ಲವೆ ಅಲ್ಲ. ಸಾಯುವ ಅವಳ ಧೈರ್ಯವನ್ನೂ ಮೆಚ್ಚುವುದಿಲ್ಲವೆ, ಎಂದು ನನ್ನನ್ನು ಪ್ರಶ್ನಿಸಬಹುದು. 'ಇಲ್ಲ' ವೆಂದು ವಿಚಾರಮಾಡಿಯೆ ಉತ್ತರವೀಯುತಿದ್ದೇನೆ ಪಾಪಕರ್ಮಿಗಳು ಇಂಥ ಧೈರ್ಯ ಪ್ರದರ್ಶಿಸಿದ್ದು ನಾವು ನೋಡಿಲ್ಲವೆ? ಆದರೂ ಅವರನ್ನು ಅಭಿನಂದಿಸುವ ವಿಚಾರ ಒಬ್ಬರಿಗೂ ಬರುವುದಿಲ್ಲವಲ್ಲ! ಆತ್ಮಹತ್ಯೆಯನ್ನು ಅನ್ಯಾಯವಾಗಿ ಹೊಗಳಿ ಅಜ್ಞ ಸಹೋದರಿಯರನ್ನು ದಾರಿಗೆಡುವಂತೆ ಮಾಡುವ ಪಾಪಕ್ಕೆ ನಾನೇಕೆ ಗುರಿಯಾಗಬೇಕು? ಸತೀತ್ವ ಪಾವಿತ್ರ್ಯದ ಪರಾಕಾಷ್ಠೆ. ಕೇವಲ ಆತ್ಮ

ಹತ್ಯೆಯಿಂದ ಈ ಪಾವಿತ್ರ್ಯ ಪಡೆವುದು ಸಾಧ್ಯವಿಲ್ಲ. ಸ್ಥಿರ ಪ್ರಯತ್ನದಿಂದ, ನಿಶ್ಚಲ ಆತ್ಮತ್ಯಾಗದಿಂದಲೆ ಅದನ್ನು ಪಡೆಯಲು ಸಾಧ್ಯ.

ಯಂಗ್ ಇಂಡಿಯಾ, ೨೧-೫-೧೯೩೧.

# " ಕೋಪಭರ ನಿಷೇಧ "

**[ ವಿಧವೆಯರು ಬ್ರಹ್ಮಚರ್ಯ ಪಾಲನೆಯಿಂದ ಮೋಕ್ಷ ಹೊಂದುವರೆಂಬ ಹೇಳಿಕೆ ಅನುಭವಸಿದ್ಧವಲ್ಲ. ಈ ಸಾಧನೆಗೆ ಕೇವಲ ಬ್ರಹ್ಮಚರ್ಯಪಾಲನವಲ್ಲದೆ ಇನ್ನೂ ಬೇರೆ ವ್ರತಸಾಧನೆಗಳು ಅವಶ್ಯವಿವೆ. ]**

ಬಂಗಾಲಿ ಸಾಲೆಯ ಮುಖ್ಯೋಪಾಧ್ಯಾಯರೊಬ್ಬರು ಹೀಗೆ ಬರೆದಿದಾರೆ:—

" 'ಬಾಲವಿಧವೆಯರನ್ನೆ ಮದುವೆಯಾಗಿರಿ' ಎಂದು ನೀವು ಮದ್ರಾಸಿನ ವಿದ್ಯಾರ್ಥಿಗಳಿಗಿತ್ತ ಉಪದೇಶವನ್ನೋದಿ ನಾನು ಹೌಹಾರಿ ಹೋಗಿದ್ದೇನೆ. ಆ ಬಗ್ಗೆ ನಾನು ನಿಮಗೆ ಈ ವಿನಮ್ರ, ಆದರೆ ಕೋಪಭರವಾದ ನಿಷೇಧ ಪತ್ರ ಬರೆಯುತ್ತಿರುವುದು.

ಬ್ರಹ್ಮಚರ್ಯ ಪಾಲನೆಯಿಂದಲೆ ಹಿಂದೂ ಸ್ತ್ರೀಯರಿಗೆ ಜಗತ್ತಿನಲ್ಲಿ ಎಲ್ಲಕ್ಕೂ ಉಚ್ಚವಾದ, ಮಹತ್ವವಾದ ಗೌರವಸ್ಥಾನ ದೊರೆತಿದೆ. ಆದರೆ ನಿಮ್ಮ ಇಂಥ ಉಪದೇಶಗಳಿಂದ ಆಜನ್ಮವಿಧವೆಯರಾಗಿರಬೇಕೆಂಬ ವಿಧವೆಯರ ಆಶಯವು ನಷ್ಟವಾಗಿ ಹೋಗುತ್ತದೆ. ನಿಮ್ಮ ಈ ಹಿತವಚನ ಅವರನ್ನು ಐಹಿಕಭೋಗದ ಮಡುವಿನಲ್ಲಿ ನೂಕುತ್ತದೆ ಅಲ್ಲದೆ ಬ್ರಹ್ಮಚರ್ಯಪಾಲನೆಯ ಮೂಲಕ ಒಂದೇ ಜನ್ಮದಲ್ಲಿ ಮುಕ್ತಿಪಡೆವ ಅವರ ಸುಸಂಧಿಯನ್ನೂ ಮಣ್ಣುಗೂಡಿಸುತ್ತದೆ ಆದುದರಿಂದ ವಿಧವೆಯರ ಬಗ್ಗೆ ನೀವು ತೋರುವ ಸಹಾನುಭೂತಿಯಿಂದ ನಿಜವಾಗಿ ಅವರ ಸೇವೆಗೈಯ್ದಂತಾಗುವುದಿಲ್ಲ. ಅಲ್ಲದೆ ಕುಮಾರಿಯರ ವೈವಾಹಿಕ ಸಮಸ್ಯೆಇತ್ತೀಚೆ ಅತಿಗಡಚಾಗಿ ಪರಿಣಮಿಸುತ್ತಿದೆ. ಇದರಿಂದ ಅವರಿಗೂ ಅನ್ಯಾಯ ಬಗೆದಂತಾಗುತ್ತದೆ. ಮೇಲಾಗಿ ನಿಮ್ಮ ಈ ವೈವಾಹಿಕ ಹೊಸ ಸಿದ್ಧಾಂತಗಳು ಜನ್ಮಾಂತರ, ಪುನರ್ಜನ್ಮ, ಮೋಕ್ಷ

ಇತ್ಯಾದಿ ಹಿಂದೂ ಸಿದ್ಧಾಂತಗಳೆಲ್ಲವನ್ನೂ ಮುಟ್ಟುಗೋಲು ಹಾಕುವುವು. ಇದರಿಂದ ಹಿಂದೂಸಮಾಜವೂ, ಅನ್ಯಸಮಾಜಗಳ ಮಟ್ಟಕ್ಕಿಳಿಯುವುದು. ಇದನ್ನು ನಾವೆಂದಿಗೂ ಸಹಿಸೆವು.

ನಮ್ಮ ಸಮಾಜದ ನೈತಿಕ ತಳಹದಿ ಶಿಥಿಲಗೊಂಡಿದ್ದುದರಲ್ಲಿ ಸಂದೇಹವಿಲ್ಲ. ಆದರೆ ನಾವು ಹಿಂದೂಧರ್ಮದ ಉದಾತ್ತ ತತ್ತ್ವ, ಉಚ್ಚ, ಆದರ್ಶಗಳನ್ನು ಧ್ಯಾನದಲ್ಲಿಟ್ಟುಕೊಂಡು ಸಾಧ್ಯವಿದ್ದಮಟ್ಟಿಗೆ ಆ ಆದರ್ಶಸಾಧನೆಗೆ ಟೊಂಕ ಕಟ್ಟಿ ನಿಲ್ಲಬೇಕಲ್ಲದೆ ಅನ್ಯ ಸಮಾಜಗಳ ಭಿನ್ನಆದರ್ಶಗಳ ಮೋಹಕ್ಕೆ ಬಲಿಬೀಳಕೂಡದು. ಅಹಲ್ಯಾಬಾಯಿ, ರಾಣಿ ಭವಾನಿ, ಬೆಹುಲಾ, ಸೀತಾ, ಸಾವಿತ್ರಿ, ದಮಯಂತಿಯರೆ ನಮ್ಮಹಿಂದೂಧರ್ಮದ ಆದರ್ಶನಾಯಿಕೆಯರು. ಅವರು ತುಳಿದ ದಾರಿಯನ್ನೆ ನಾವೂ ತುಳಿಯಬೇಕು. ಆದುದರಿಂದ ನಿಮ್ಮಲ್ಲಿ ನನ್ನ ನಮ್ರ ಅರಿಕೆಯಿಷ್ಟೆ—ಇಂಥ ಗಡಚು ಸಮಸ್ಯೆಗಳ ಬಗ್ಗೆ ನಿಮ್ಮ ಅಭಿಪ್ರಾಯ ಹೇಳಬಾರದೆಂದೂ, ತನಗೆ ಹಿತತೋರಿದಂತೆ ನಡೆಯಲು ಸಮಾಜಕ್ಕೆ ಅವಕಾಶಕೊಡಬೇಕೆಂದೂ ನಾನು ಬೇಡಿಕೊಳ್ಳುವೆ. ”

ಈ ನಿಷೇಧಪರ ಪತ್ರ ಓದಿ ನನ್ನ ಮತಾಂತರವೂ ಆಗಲಿಲ್ಲ; ಪಶ್ಚಾತ್ತಾಪ ಪಡಬೇಕೆನ್ನುವ ಪರಿಣಾಮವೂ ಆಗಲಿಲ್ಲ. ಆತ್ಮಬಲವುಳ್ಳ, ಬ್ರಹ್ಮಚರ್ಯದ ಲಾಭವನ್ನರಿತು ಅದನ್ನು ಪಾಲಿಸಲು ದೃಢಚಿತ್ತವುಳ್ಳ ಯಾವ ವಿಧವೆಯೂ ನನ್ನ ಉಪದೇಶದಿಂದ ಮತಪರಿವರ್ತಿತಳಾಗುವುದು ಸಾಧ್ಯವಿಲ್ಲ. ಆದರೆ ವಿವಾಹಕಾಲದಲ್ಲಿ, ವಿವಾಹದ ನಿಜ ಅರ್ಥವನ್ನೆ ಅರಿಯದ ಹಸುಳೆ ವಿಧವೆಯರು ನನ್ನ ಆದೇಶಕ್ಕನುಸಾರವಾಗಿ ನಡೆದುಕೊಂಡರೆ ಅವರಿಗೆ ಕಲ್ಯಾಣವಾಗುವುದರಲ್ಲಿ ಸಂದೇಹವಿಲ್ಲ. ಈ ಹಸುಳೆಗಳನ್ನು ವಿಧವೆಯರೆಂಬ ಹೆಸರಿನಿಂದ ಕರೆಯುವುದೆಂದರೆ ಪವಿತ್ರವಾದ ಆ ಪದದ ದುರುಪಯೋಗಮಾಡಿಕೊಂಡಂತೆಯೆ ಸೈ. ಯಾವ ಸದುದ್ದೇಶವಿಟ್ಟುಕೊಂಡು ಈ ಪತ್ರಲೇಖಕರು ಪತ್ರ ಬರೆದಿದಾರೊ ಅದೆ ಉದ್ದೇಶಸಾಧನೆಗಾಗಿಯೇ ನಾನು ದೇಶದ ಯುವಕರಿಗೆ 'ಮದುವೆಯಾಗುವುದೆ ಇದ್ದರೆ ವಿಧವೆಯರೆಂದು ಕರೆವ ಬಾಲಿಕೆಯರನ್ನೆ ಆಗಿರಿ, ಇಲ್ಲದಿದ್ದರೆ ಮದುವೆಯನ್ನೆ ಮಾಡಿಕೊಳ್ಳಬೇಡಿ' ಎಂದು ಉಪದೇಶಿಸುತಿದ್ದೇನೆ. ಬಾಲವೈಧವ್ಯದ

ಅಭಿಶಾಪದಿಂದ ಮುಕ್ತರಾದಗೆ ಮಾತ್ರ ವಿವಾಹ ಸಂಸ್ಥೆಯ ಪಾವಿತ್ರ್ಯ ಉಳಿಯುವುದು.

ವಿಧವೆಯರು ಬ್ರಹ್ಮಚರ್ಯಪಾಲನೆಯಿಂದ ಮೋಕ್ಷ ಹೊಂದುವರೆಂಬ ಹೇಳಿಕೆ ಅನುಭವಸಿದ್ಧವಲ್ಲ. ಈ ಸಾಧನೆಗೆ ಬ್ರಹ್ಮಚರ್ಯಪಾಲನವಲ್ಲದೆ ಬೇರೆ ವ್ರತಸಾಧನೆಗಳೂ ಅಗತ್ಯವಿವೆ. ಒತ್ತಾಯವಾಗಿ ಹೇರಿದ ಬ್ರಹ್ಮಚರ್ಯದಿಂದ ಯಾವ ಕೀರ್ತಿಯೂ ಇಲ್ಲ. ಅಲ್ಲದೆ ಅದರಿಂದ ಸಮಾಜದ ನೈತಿಕಪತನಕ್ಕೆ ಕಾರಣೀಭೂತವಾಗುವ ಅನೇಕ ದುರ್ಗುಣಗಳು ಗುಪ್ತವಾಗಿ ಅಂಟಿಕೊಳ್ಳುವವು. ನಾನು ಬರೆದುದೆಲ್ಲವೂ ಅನುಭವಗಳ ಆಧಾರದಿಂದಲೆ ಎಂದು ಪತ್ರಲೇಖಕರು ಗಮನಿಸಬೇಕು

ನನ್ನ ಉಪದೇಶದ ಫಲಸ್ವರೂಪವಾಗಿ ಕುಮಾರಿ ವಿಧವೆಯರಿಗೆ ನ್ಯಾಯಸಲ್ಲುವ ಪಕ್ಷದಲ್ಲಿ ಅದರಿಂದ ಸತ್ಯವಾಗಿಯೂ ನನಗೆ ಹರುಷವುಂಟಾಗುವುದು. ಅಲ್ಲದೆ ನನ್ನೀ ಉಪದೇಶದಿಂದ ಉಳಿದ ಬಾಲಿಕೆಯರಿಗೆ ತಮ್ಮ ಪೂರ್ಣ ಬೆಳವಣಿಗೆಯಾಗುವ ಮೊದಲೆ ಪುರುಷನ ಕಾಮವಾಸನೆಗೆ ಬಲಿಯಾಗುವ ಬದಲು ಬೌದ್ಧಿಕ, ಶಾರೀರಿಕ ಉಭಯ ವಿಕಾಸಕ್ಕೂ ಅವಕಾಶ ದೊರೆಯುವುದು.

ಜನ್ಮಾಂತರ, ಪುನರ್ಜನ್ಮ, ಮೋಕ್ಷ ಇತ್ಯಾದಿ ನಂಬಿಕೆಗಳಿಗೆ ವಿರೋಧವಾದ ಯಾವ ಸಿದ್ಧಾಂತಗಳನ್ನೂ ನಾನು ಕಲ್ಪಿಸಿಲ್ಲ. ಕೀಳು ಜಾತಿಯವರೆಂದು ಈ ಲೇಖಕರು ಮೂದಲಿಸಿ ಬರೆದ ಲಕ್ಷೋಪಲಕ್ಷ ಹಿಂದೂದಲಿತ ವರ್ಗಗಳಲ್ಲಿ ವಿಧವಾ ವಿವಾಹಕ್ಕೆ ನಿಷೇಧವಿಲ್ಲ. ಅಲ್ಲದೆ ವಯಸ್ಕ ವಿಧುರರು ಪುನರ್ವಿವಾಹವಾದರೆ ಆ ನಂಬುಗೆಗೆ ಯಾವ ಪೆಟ್ಟೂ ಇಲ್ಲವಂತೆ. ಆದರೆ ಹಣೆಗೆ ವಿಧವೆಯರೆಂದು ಸುಳ್ಳುಪಟ್ಟಿ ಅಂಟಿಸಿದ ಹಸುಳೆಯರ ಮದುವೆ ಮಾಡಿದರೆ ಆ ನಂಬುಗೆಗೆ ಧಕ್ಕೆ ತಗಲುವುದಂತೆ. ಇದರರ್ಥವೇನೋ ನನಗೆ ತಿಳಿಯದು. ಜನ್ಮಾಂತರ, ಪುನರ್ಜನ್ಮ ಇತ್ಯಾದಿ ನನಗೆ ಬರಿಯ ಸಿದ್ಧಾಂತಗಳಲ್ಲ; ಸೂರ್ಯೋದಯದಷ್ಟು ಸತ್ಯಸಂಗತಿ ಎಂದು ಪತ್ರಲೇಖಕರು ನೆನಪಿಡಲಿ. ಮುಕ್ತಿ ಸತ್ಯವಾದುದು; ಅದನ್ನು ಹೊಂದಲು ನಾನು ನಿತ್ಯವೂ ಹೋರಾಡುತ್ತಿದ್ದೇನೆ. ಮುಕ್ತಿಯ ವಿಷಯವಾಗಿ ಯೋಚಿಸಿದಂತೆಲ್ಲ ನನಗೆ ಈ ಬಾಲವಿಧವೆ

ಯರಿಗಾದ ಅನ್ಯಾಯದ ಬಗ್ಗೆ ಜ್ಞಾನೋದಯವಾಗತೊಡಗಿತು. ಷಂಢರಾದ ನಾವು, ಅನ್ಯಾಯಕ್ಕೀಡಾದ ಬಾಲವಿಧವೆಯರ ಜೊತೆಗೆ, ಲೇಖಕರು ಉದಾಹರಿಸಿದ ಅಮರಕೀರ್ತಿಪಡೆದ ಸೀತೆ, ದಮಯಂತಿಯರ ನಾಮೋಚ್ಚಾರಣೆಯನ್ನು ಒಂದೇ ಉಸುರಿನಲ್ಲಿ ಮಾಡುವುದು ಶುದ್ಧ ಪಾಪಕರ.

ಹಿಂದೂ ಧರ್ಮದಲ್ಲಿ ನಿಜವಾದ ವೈಧವ್ಯಕ್ಕೆ ಗೌರವವಾದ ಮನ್ನಣೆಯಿದೆ; ಅದು ಅರ್ಹವೂ ಅಹುದು. ವೇದಕಾಲದಲ್ಲಿ ವಿಧವಾ ವಿವಾಹಕ್ಕೆ ನಿಷೇಧವಿತ್ತೆನ್ನುವುದಕ್ಕೆ, ನನಗೆ ಗೊತ್ತಿದ್ದ ಮಟ್ಟಿಗೆ, ಯಾವ ಆಧಾರಗಳೂ ಇಲ್ಲ. ನಾನು ಈ ಧರ್ಮಯುದ್ಧ ಹೂಡಿರುವುದು ನಿಜವಾದ ವಿಧವೆಯರ ವಿರುದ್ಧವಲ್ಲ; ಅದರ ಕ್ರೂರ ವಿಡಂಬನೆಯ ವಿರುದ್ಧ. ಆದುದರಿಂದ ಇಂಥ ಬಾಲಿಕೆಯರನ್ನು ವಿಧವೆಯರೆಂದು ಗಣಿಸದಿರುವುದೆ ವಿಹಿತ. ಧರ್ಮವೀರರಾದ ಯುವಕರು ಇಂಥ ಅನ್ಯಾಯ ಭಾರದಿಂದ ಜರ್ಜರಿತರಾದ ವಿಧವೆಯರನ್ನು ಉದ್ಧರಿಸಲಿ. ಆದುದರಿಂದಲೆ ನಾನು 'ಅನ್ಯಾಯವಾಗಿ ವಿಧವೆಯರೆಂದು ಕರೆವ ಈ ಹಸುಳೆಯರನ್ನಲ್ಲದೆ ಬೇರೆ ಯಾರನ್ನೂ ಮದುವೆ ಮಾಡಿಕೊಳ್ಳಬೇಡಿ' ಎಂದು ಪುನಃ ನಮ್ರವಾಗಿ ಆದರೆ ಕಂಠೋಕ್ತವಾಗಿ ಉಪದೇಶಿಸುವೆ.

**ಯಂಗ್ ಇಂಡಿಯಾ, ೬–೧೦–೧೯೨೬.**

# "ವಿವಾಹಸಂಸ್ಥೆಯನ್ನೆ ವಿಧ್ವಂಸಗೊಳಿಸಿರಿ"

[ವಿವಾಹವೆಂದರೆ ಧರ್ಮವನ್ನು ರಕ್ಷಿಸುವ ಬೇಲಿಯೆಂದು ನನ್ನ ಮತ. ಅದನ್ನು ನಾಶಪಡಿಸಿದರೆ ಧರ್ಮ ನಿರ್ನಾಮವಾಗುವುದು. ಆತ್ಮಸಂಯಮನವೆ ಧರ್ಮದ ನೆಲಗಟ್ಟು. ಆದ್ದರಿಂದ ವಿವಾಹವೆಂದರೆ ಆತ್ಮಸಂಯಮನವಲ್ಲದೆ ಬೇರೇನೂ ಅಲ್ಲ].

ನನ್ನ ಸುಪರಿಚಿತ ಮಿತ್ರರೊಬ್ಬರು ಒಂದು ಸಮಸ್ಯೆಯನ್ನು ನನ್ನೆದುರು ಇಟ್ಟಿದಾರೆ. ಅದನ್ನು ಬರಿಯ ಶಾಸ್ತ್ರಚರ್ಚಾ ದೃಷ್ಟಿಯಿಂದಲೆ ನಾನು ವಿಚಾರಿಸುವೆ. ಏಕೆಂದರೆ ಅವರು ಪಟ್ಟ ಅಭಿಪ್ರಾಯಗಳು ನಿಜವಾಗಿಯೂ

ಅವರವಲ್ಲವೆಂದು ನಾನು ಪೂರ್ಣ ಬಲ್ಲೆ. "ಆಧುನಿಕ ನೀತಿಶಿಷ್ಟಾಚಾರಗಳು ಅನೈಸರ್ಗಿಕವಾದವುಗಳಲ್ಲವೆ?" ಎಂದವರು ಪ್ರಶ್ನಿಸಿ 'ಅದು ನೈಸರ್ಗಿಕವಾದಲ್ಲಿ ಎಲ್ಲ ಕಾಲದಲ್ಲಿ, ಎಲ್ಲ ಜಾತಿಕುಲಗಳಲ್ಲಿ ಅದೇ ನೀತಿಯಾಗಿರಬೇಕಲ್ಲವೆ? ಆದರೆ ಬೇರೆಬೇರೆ ಕುಲಗೋತ್ರಗಳಲ್ಲಿ ಭಿನ್ನಭಿನ್ನವಾದ ಚಿತ್ರವಿಚಿತ್ರವಾದ ವೈವಾಹಿಕ ಸಾಂಪ್ರದಾಯಗಳಿವೆ. ಈ ನೀತಿ ನಿಯಮಗಳನ್ನು ಬಳಕೆಗೆ ತಂದ ಮಾನವನು ಪಶುವಿಗಿಂತ ಗೌಣಸ್ಥಿತಿಗೆ ಇಳಿದಿದ್ದಾನೆ. ಪಶುಕೋಟಿಯಲ್ಲಿ ಕಾಣದ ಎಷ್ಟೋ ರೋಗರುಜಿನಗಳನ್ನು ನಾವಿಂದು ಮಾನವನಲ್ಲಿ ಕಾಣುತಿದ್ದೇವೆ. ಪಶುಸಮುದಾಯದಲ್ಲಿ ದುರ್ಲಭವಾದ ಶಿಶುಹತ್ಯ, ಗರ್ಭಸ್ರಾವ, ಬಾಲ್ಯವಿವಾಹ ಮುಂತಾದವು ವಿವಾಹವನ್ನು ಪವಿತ್ರವೆಂದು ಗಣಿಸುವ ಮಾನವಜಾತಿಗೆ ಅಭಿಶಾಪವಾಗಿ ಪರಿಣಮಿಸಿವೆ. ನೈತಿಕ ನಿಯಮಗಳಿಂದ ನಮಗಾದ ಹಾನಿಗೆ ತುದಿಮೊದಲಿಲ್ಲ. ಹಿಂದೂ ವಿಧವೆಯರ ಇಂದಿನ ಶೋಚನೀಯಸ್ಥಿತಿಗೆ ಈಗಿನ ವೈವಾಹಿಕ ಕಟ್ಟಳೆಯಲ್ಲದೆ ಬೇರಾವ ಕಾರಣವಿದೆ? ನಾವು ನಿಸರ್ಗದೆಡೆಗೆ ತೆರಳಬಾರದೇಕೆ? ಪಶುಕೋಟಿ ಜೀವನದಿಂದ ಪಾಠವನ್ನೇಕೆ ಕಲಿಯಕೂಡದು?"

'ಅನಿರ್ಬಂಧ ಪ್ರೇಮ' ದ ಪಾಶ್ಚಾತ್ಯ ಪ್ರತಿಪಾದಕರು ಮೇಲಿನ ವಾದಸರಣಿಯನ್ನೊಪ್ಪುವರೊ ಅಥವಾ ಅದಕ್ಕಿಂತಲೂ ಬಲಾಢ್ಯ ವಿತರ್ಕವನ್ನು ಮುಂದಿಡುವರೊ ನನಗೆ ತಿಳಿಯದು. ಆದರೆ 'ವೈವಾಹಿಕ ಬಂಧನ' ಬರಿಯ ಕಾಡುಪದ್ಧತಿಯೆಂದು ತಿಳಿದುಕೊಳ್ಳುವ ಬುದ್ಧಿ ಪಾಶ್ಚಾತ್ಯರವೆಂದು ನಾನು ಖಂಡಿತವಾಗಿ ಹೇಳಬಲ್ಲೆ. ಲೇಖಕರು ತಮ್ಮ ವಾದಪರ ವಿತರ್ಕಗಳನ್ನು ಪಾಶ್ಚಿಮಾತ್ಯರಿಂದಲೆ ಕಡವಾಗಿ ತಂದಿದ್ದರೆ ಅದನ್ನು ಎದುರಿಸುವುದರಲ್ಲಿ ಕಷ್ಟವಿಲ್ಲ.

ಮಾನವನ ಮತ್ತು ಪಶುಗಳ ಪರಸ್ಪರ ತುಲನೆ ಮಾಡುವ ವಿತರ್ಕವೆ ತಪ್ಪು. ಆದ್ದರಿಂದ ಅವರ ತರ್ಕವೆ ದೋಷಪೂರಿತವಾಗಿದೆ. ಏಕೆಂದರೆ ನೈತಿಕ-ಸಹಜಜ್ಞಾನದ ದೃಷ್ಟಿಯಿಂದಾಗಲಿ, ಸಂಸ್ಥೆಯ ದೃಷ್ಟಿಯಿಂದಾಗಲಿ ಮಾನವನು ಪಶುವಿಗಿಂತ ಶ್ರೇಷ್ಠನು. ಮಾನವನಿಗೆ ಅನ್ವಯಿಸುವ ನಿಸರ್ಗ ನಿಯಮಗಳು ಪಶುಗಳಿಗೆ ಅನ್ವಯಿಸಲಾರವು. ಅವುಗಳಲ್ಲಿ ವ್ಯತ್ಯಾಸವಿದೆ. ಮಾನವನಿಗೆ ಸಮಂಜಸಬುದ್ಧಿ, ವಿವೇಚನಾತ್ಮಕದೃಷ್ಟಿ, ಸ್ವತಂತ್ರ

ಚಿತ್ತಗಳಿವೆ. ಆದರೆ ಪಶುವಿಗೆ ಇವೆಲ್ಲ ಇಲ್ಲ. ಅದು ಸ್ವತಂತ್ರ ಪ್ರಾಣಿಯಲ್ಲ ಒಳಿತು-ಕೆಡಕುಗಳ, ಸತ್ಯಾ ಸತ್ಯತೆಯ ವಿವೇಚನಾಶಕ್ತಿ ಆದಕ್ಕಿಲ್ಲ. ಆದರೆ ಮನುಷ್ಯನಿಗೆ ಸ್ವತಂತ್ರ ಬುದ್ಧಿ ಇದೆ; ವಿವೇಚನಾ ಶಕ್ತಿ ಇದೆ. ನಿಸರ್ಗದತ್ತ ಬುದ್ಧಿಯನ್ನು ಸರಿಯಾಗಿ ಉಪಯೋಗಿಸಿಕೊಂಡಲ್ಲಿ ಅವನು ಪಶುವಿಗಿಂತ ಶ್ರೇಷ್ಠನಾಗುವನು; ಅವಿವೇಕದಿಂದ ಉಪಯೋಗಿಸಿಕೊಂಡಲ್ಲಿ ಪಶುವಿಗಿಂತ ಕೀಳಾಗುವನು. ಈ ವಿಶ್ವದಲ್ಲಿ ಅತ್ಯಂತ ಅನಾಗರಿಕ ಮಾನವಕುಲಗಳೂ ಕೂಡ ಗಂಡು-ಹೆಂಣಿನ ವಿಷಯವಾಗಿ ಕೆಲವೊಂದು ನಿಯಮ ಅಗತ್ಯವೆಂದು ಒಪ್ಪಿಕೊಂಡಿವೆ. ಈ ಬಂಧನಗಳನ್ನು ಕಾಡುಸಂಪ್ರದಾಯಗಳೆಂದು ಬಗೆದರೆ ಎಲ್ಲ ನಿರ್ಬಂಧಗಳಿಂದ ಮುಕ್ತರಾಗುವುದೆ ಮಾನವಕುಲದ ಕಟ್ಟಳೆಯಾಗಬೇಕಾದೀತು. ಮಾನವರೆಲ್ಲರೂ ಈ ಅನಿರ್ಬಂಧ ನಿಯಮಗಳಿಗನುಸಾರವಾಗಿ ತಮ್ಮ ನಡತೆಯಿಟ್ಟುಕೊಂಡರೆ ೨೪ ಗಂಟೆಯೊಳಗಾಗಿ ಮಹಾ ವಿಪ್ಲವವಾಗುವುದರಲ್ಲಿ ಸಂದೇಹವಿಲ್ಲ ಸ್ವಭಾವದಿಂದ ಮಾನವನು ಪಶುವಿಗಿಂತ ಕಾಮಾತುರನು. ಆದುದರಿಂದ ಬಂಧನದಿಂದ ಮುಕ್ತನಾದಕ್ಷಣವೆ ನಿಗ್ರಹವಿಲ್ಲದ ಈ ಲಾಲಸೆಯೆಂಬ ಲಾವಾರಸವು ಜಗತ್ತನ್ನೆ ಪಸರಿಸಿ ಮಾನವಕುಲವನ್ನೆ ಮಂಣುಗೂಡಿಸಬಹುದು. ಆತ್ಮಸಂಯಮ, ಆತ್ಮತ್ಯಾಗ ಇವು ಮಾನವನಿಗೆ ಸಾಧ್ಯವಲ್ಲದೆ ಪಶುಗಳಿಗಲ್ಲ. ಆದುದರಿಂದಲೆ ಅವನು ಪಶುಗಳಿಗಿಂತ ಮೇಲ್ಪಟ್ಟದವನು.

ಇತ್ತೀಚೆ ಸರ್ವಸಾಮಾನ್ಯವಾಗಿ ಕಾಣಬರುವ ಅನೇಕ ರೋಗಗಳಿಗೆ ವೈವಾಹಿಕ ನಿಯಮಗಳ ಉಲ್ಲಂಘನೆಯೆ ಕಾರಣ. ವೈವಾಹಿಕ ನಿಯಮಗಳನ್ನು ಅಕ್ಷರಶಃ ಪಾಲಿಸುವಂಥ ವ್ಯಕ್ತಿಯು ವಿವರಿಸಿದ ರೋಗಗಳಿಗೆ ತುತ್ತಾದ ಒಂದಾದರೂ ಉದಾಹರಣೆಯನ್ನು ನಮ್ಮ ಈ ಲೇಖಕರು ತೋರಿಸಲಿ ನೋಡೋಣ. ಭ್ರೂಣಹತ್ಯೆ, ಬಾಲ್ಯವಿವಾಹ ಇತ್ಯಾದಿಗಳೆಲ್ಲವೂ ವೈವಾಹಿಕ ನಿಯಮಗಳ ಉಲ್ಲಂಘನೆಯ ಫಲಸ್ವರೂಪ. ಗಂಡು-ಹೆಂಣುಗಳ ಶರೀರ ಪರಿಪಕ್ವವಾಗಿ ಬೆಳೆಯಬೇಕು; ನಿರೋಗಿಯಾಗಿರಬೇಕು. ಅವರು ಆತ್ಮಸಂಯಮನವರಿತಿರಬೇಕು; ಅವರಿಗೆ ಮಕ್ಕಳ ಬಯಕೆಯಾಗಿರಬೇಕು. ಆಗಮಾತ್ರ ಗಂಡಾಗಲಿ, ಹೆಂಣಾಗಲಿ ತನ್ನ ಜೀವನದ ಜೊತೆಗಾರರನ್ನು

ಅರಿಸಿಕೊಳ್ಳಬಹುದೆಂದು ವಿವಾಹಸೂತ್ರ ಸಾರುತ್ತದೆ. ಈ ಸೂತ್ರಗಳನ್ನು ಕಟ್ಟುನಿಟ್ಟಾಗಿ ಪಾಲಿಸುವವರಿಗೆ, ಈ ವೈವಾಹಿಕಬಂಧನ ಪವಿತ್ರಬಂಧನ ವೆಂದು ಗಣಿಸುವವರಿಗೆ, ದುಃಖದುಮ್ಮಾನ ಇಲ್ಲವೆ ಪರಿತಾಪದ ಸಂದರ್ಭ ಒಮ್ಮೆಯೂ ಬರಲಾರದು. ವೈವಾಹಿಕ ಬಂಧನ ಪವಿತ್ರ ಬಂಧನವೆಂಬ ತಿಳಿವಳಿಕೆ ಇದ್ದಲ್ಲಿ, ಆಗ ಅದು ಬರಿಯ ಶಾರೀರಕಬಂಧನವಾಗದೆ ಎರಡು ಆತ್ಮಗಳ ಮಧುರ ಬಂಧನವಾಗುವುದು. ಅವರಲ್ಲೊಬ್ಬರ ಮರಣದ ನಂತರವೂ ಆ ಆತ್ಮಗಳು ಬೇರ್ಪಡಲಾರವು. ಎರಡು ಜೀವಿಗಳ ಆತ್ಮ ಮಿಲನವಾದ ಸಂದರ್ಭದಲ್ಲಿ ವಿದುರನ ಅಥವಾ ವಿಧವೆಯ ಪುನರ್ವಿವಾಹದ ವಿಚಾರಕ್ಕೆ ಆಸ್ಪದವೆ ಉಳಿಯಲಾರದು. ಒಂದುವೇಳೆ ಇದ್ದರೆ ಅದು ಅನುಚಿತ ; ಅಲ್ಲದೆ ಪ್ರಮಾದವೂ ಅಹುದು. ವೈವಾಹಿಕ ನಿಯಮಗಳನ್ನೆ ಉಲ್ಲಂಘಿಸಿ ಮಾಡಿದ ವಿವಾಹಗಳನ್ನು ವಿವಾಹವೆಂದು ಕರೆಯುವುದು ಯೋಗ್ಯವಾಗಲಾರದು. ಈಗ ನಿಜವಾದ ವಿವಾಹಗಳು ತೀರ ಕಡಮೆ. ಹೀಗಾದುದು ವಿವಾಹಸಂಸ್ಥೆಯ ದೋಷವಲ್ಲ. ಅದು ವಿಡಂಬನೆಯ ಸ್ಥಿತಿ ಗಿಳಿದ ಈಗಿನ ವೈವಾಹಿಕ ಪದ್ಧತಿಯ ದೋಷ. ಅದನ್ನು ನಾವು ಸುಧಾರಿಸ ಬೇಕು.

"ವಿವಾಹ ನೈತಿಕ ಹಾಗೂ ಧಾರ್ಮಿಕಬಂಧನವಲ್ಲ. ಅದು ಕೇವಲ ಒಂದು ಸಾಂಪ್ರದಾಯ. ನೀತಿ, ಧರ್ಮ ಇವುಗಳಿಗೂ ರೂಢಿ, ಪದ್ಧತಿಗಳಿಗೂ ಏನೂ ಸಂಬಂಧವಿಲ್ಲ. ಆದುದರಿಂದ ವಿವಾಹಸಂಸ್ಥೆಯನ್ನೆ ನಿರ್ಮೂಲ ಮಾಡುವುದು ಯೋಗ್ಯ"ವೆಂದು ನಮ್ಮ ಲೇಖಕರು ಹೇಳಿದಾರೆ. ವಿವಾಹ ವೆಂದರೆ ಧರ್ಮವನ್ನು ರಕ್ಷಿಸುವ ಬೇಲಿಯೆಂದು ನನ್ನ ಮತ. ಅದನ್ನು ನಾಶಪಡಿಸಿದರೆ ಧರ್ಮ ನಿರ್ನಾಮವಾಗುವುದು. ಆತ್ಮಸಂಯಮನವೆ ಧರ್ಮದ ನೆಲಗಟ್ಟು. ಹಾಗೂ ವಿವಾಹವೆಂದರೆ ಆತ್ಮಸಂಯಮನವಲ್ಲದೆ ಬೇರೇನೂ ಅಲ್ಲ. ಆತ್ಮಸಂಯಮನವರಿಯದ ಮಾನವನಿಗೆ ಆತ್ಮ ಸಾಕ್ಷಾತ್ಕಾರದ ಆಸೆಯೆ ಇಲ್ಲ. ನಾಸ್ತಿಕನಿಗೆ ಮತ್ತು ಜಡವಾದಿಗೆ ಆತ್ಮ ಸಂಯಮನದ ಆವಶ್ಯಕತೆ ಅರುಹುವುದು ಅತ್ಯಂತ ಕಠಿಣಕಾರ್ಯವೆಂದು ನಾನೊಪ್ಪುವೆ. ಆದರೆ ವಿನಾಶಿಯಾದ ಈ ದೇಹ ಅವಿನಾಶಿಯಾದ ಆತ್ಮ ನಿಂದ ತೀರ ಭಿನ್ನವಾದುದೆಂದು ಅರಿತವನು ಆತ್ಮಸಂಯಮನ, ಆತ್ಮತ್ಯಾಗ

ಗಳಿಲ್ಲದೆ ಮೋಕ್ಷಸಾಧನೆ ಸಾಧ್ಯವಿಲ್ಲವೆಂದು ಕೂಡಲೆ ತಿಳಿದುಕೊಳ್ಳಬಲ್ಲನು. ಈ ದೇಹ ಕಾಮುಲಾಲಸೆಯ ಕ್ರೀಡಾಂಗಣವೂ ಆಗಬಹುದು; ಆತ್ಮ ಸಾಕ್ಷಾತ್ಕಾರದ ದೇಗುಲವೂ ಆಗಬಹುದು. ಆತ್ಮಸಾಕ್ಷಾತ್ಕಾರದ ದೇಗುಲ ವಾದಲ್ಲಿ ಸ್ವೇಚ್ಛಾಚಾರಕ್ಕೆ ಅಲ್ಲಿ ಎಡೆಯಿಲ್ಲ. ಆ ಆತ್ಮ ಸದಾ ದೇಹವನ್ನು ನಿಗ್ರಹಿಸಲೇಬೇಕು.

ವೈವಾಹಿಕ ಬಂಧನ ಶಿಥಿಲವಿದ್ದಲ್ಲಿ, ಆತ್ಮಸಂಯಮವನ್ನು ಸರಿಯಾಗಿ ಪಾಲಿಸದಿದ್ದ ಕುಟುಂಬದಲ್ಲಿ, ನಾರಿ ಮಾರಿಯಾಗುತ್ತಾಳೆ. ಪಶುಗಳಂತೆ ಮನುಷ್ಯನೂ ನಿರುಂಕಶನಾದರೆ ಅವನು ನೇರವಾಗಿ ವಿನಾಶದ ಮಾರ್ಗವನ್ನೆ ಹಿಡಿಯುವುದು ಖಂಡಿತ. ಪತ್ರಲೇಖಕರು ದೂರಿಹೇಳುವ ಎಲ್ಲ ಅನಿಷ್ಟ ಗಳನ್ನೂ ನಿರ್ಮೂಲ ಮಾಡಬಹುದು; ಆದರೆ ವಿವಾಹಸಂಸ್ಥೆಯನ್ನೆ ಮುರಿ ಯುವುದರಿಂದಲ್ಲ–ವೈವಾಹಿಕ ನಿಯಮಗಳನ್ನು ಸರಿಯಾಗಿ ಅರಿತುಕೊಂಡು ಕಟ್ಟುನಿಟ್ಟಾಗಿ ಪಾಲಿಸುವುದರಿಂದ.

ಕೆಲವು ಸಮಾಜಗಳಲ್ಲಿ ಗಂಡು-ಹೆಂಣಿನ ಸಂಬಂಧ ತೀರ ಹತ್ತಿರದ ಬಂಧುಗಳಲ್ಲಿಯೆ ಬೆಳೆಸಲು ಅನುಮತಿಯುಂಟು ಆದರೆ ಕೆಲ ಸಮಾಜ ಗಳಲ್ಲಿ ಅಂತಹ ಸಂಬಂಧಕ್ಕೆ ಮನ್ನಣೆಯಿಲ್ಲ. ಕೆಲವು ಸಮಾಜಗಳಲ್ಲಿ ಬಹುವಿವಾಹವಿದ್ದರೆ ಇನ್ನು ಕೆಲವುಗಳಲ್ಲಿ ಅದಕ್ಕೆ ನಿಷೇಧ. ಎಲ್ಲ ಕುಲ ಗೋತ್ರದವರೂ ಒಂದೇ ನೀತಿಕಟ್ಟಳೆಯನ್ನಿಟ್ಟುಕೊಳ್ಳುವುದು ಉಚಿತವೆಂದು ಹೇಳಿದರೆ ಸಂಯಮ ಮುಂತಾದ ಎಲ್ಲ ನಿರ್ಬಂಧಗಳನ್ನು ನಿರ್ಮೂಲಗೊಳಿಸ ಬೇಕೆಂದು ಹೇಳಿದಂತಾಗುವುದಿಲ್ಲ. ನಮ್ಮ ಅನುಭವ ಹೆಚ್ಚಿ ಜಾಣರಾದಂತೆ, ನಮ್ಮ ನೀತಿಕಟ್ಟಳೆಗಳಲ್ಲಿ ಏಕತೆ, ಸಮದೃಷ್ಟಿ ಒಂದೆ ಬರುವುದು. ಈಗಲೂ ಜಗತ್ತಿನಲ್ಲಿ ನೈತಿಕದೃಷ್ಟಿಯಿಂದ ಏಕ ವಿವಾಹವೆ ಉಚ್ಚ ಆದರ್ಶವೆಂದೆಣಿ ಸಲ್ಪಟ್ಟಿದೆ. ಅಲ್ಲದೆ ಬಹುವಿವಾಹ ಅನಿವಾರ್ಯವಾದುದೆಂದು ಯಾವ ಧರ್ಮವೂ ಸಾರಿಲ್ಲ. ಕಾಲಮಾನಕ್ಕೆ ತಕ್ಕಂತೆ ನಮ್ಮ ರೂಢಿ ಸಂಪ್ರದಾಯ ಗಳು ಮಾರ್ಪಟ್ಟರೂ ಆ ಆದರ್ಶಕ್ಕೆ ಯಾವ ಚ್ಯುತಿಯೂ ಬರಲಾರದು.

ಬಾಲವಿಧವೆಯರ ಪುನರ್ವಿವಾಹದ ವಿಷಯದಲ್ಲಿ ಸಲಸಲಕ್ಕೆ ನನ್ನ ಅಭಿಪ್ರಾಯ ಹೇಳುವ ಆವಶ್ಯಕತೆಯಿಲ್ಲ. ವಿಧವಾ ಕುಮಾರಿಯರ ಪುನ ರ್ವಿವಾಹವಾಗಬೇಕೆಂಬುದು ಇಷ್ಟವಿಷ್ಟೇ ಅಲ್ಲ, ಅದು ಕುಮಾರಿ ವಿಧವೆಯರ

ಪುನರ್ವಿವಾಹವಾಗಬೇಕೆಂಬುದು ಇಷ್ಟವಿಷ್ಟೇ ಅಲ್ಲ, ಅದು ಕುಮಾರಿ ವಿಧವೆಯರ ತಂದೆತಾಯಿಂದಿರ ಆದ್ಯಕರ್ತವ್ಯವೆಂದೆ ನಾನು ತಿಳಿದಿದೇನೆ.

**ಯಂಗ್ ಇಂಡಿಯಾ, ೩-೬-೧೯೨೬.**

# " ಶಿಥಿಲ ವಿಚಾರ "

---

[ ಹೃದಯಹೀನ ಅಥವಾ ಅಜ್ಞ ತಾಯಿತಂದೆಗಳು ತನ್ನ ಬಾಲಿಕೆಯರನ್ನು ಅವರ ಅರಿವಿಲ್ಲದೆ, ಒಪ್ಪಿಗೆಯಿಲ್ಲದೆ, ಅವರ ಹಿತಾಹಿತ ಲಕ್ಷಿಸದೆ ಲಗ್ನಮಾಡಿಕೊಟ್ಟರೆ, ಅದು ನಿಜವಾದ ಮದುವೆಯೆಂದೆನಿಸಲಾರದು. ಅದು ಪವಿತ್ರ ಸಂಸ್ಕಾರವಾಗದ್ದರಿಂದ ಇಂಥ ಬಾಲಿಕೆಯರ ಪುನರ್ವಿವಾಹ ಒಂದು ಕರ್ತವ್ಯವೆ ಸರಿ.]

ಪತ್ರಲೇಖಕರೊಬ್ಬರು ಹೀಗೆ ಬರೆಯುತ್ತಾರೆ :—

" ವಿವಾಹಸಂಸ್ಥೆಯನ್ನೆ ವಿಧ್ವಂಸಗೊಳಿಸಿರಿ " ಎಂಬ ಲೇಖದಲ್ಲಿ ನೀವು ಹೀಗೆ ಬರೆದಿದೀರಿ—'ವೈವಾಹಿಕಬಂಧನ ಪವಿತ್ರಬಂಧನವೆಂಬ ತಿಳಿವಳಿಕೆ ಇದ್ದಲ್ಲಿ ಆಗ ಆ ಬಂಧನ ಕೇವಲ ಶಾರೀರಿಕಬಂಧನವಾಗದೆ ಎರಡು ಆತ್ಮಗಳ ಮಧುರಬಂಧನವಾಗುವುದು. ಅವರಲ್ಲೊಬ್ಬರ ಮರಣಾನಂತರವೂ ಆ ಆತ್ಮಗಳು ಬೇರ್ಪಡಲಾರವು ಎರಡು ಜೀವಿಗಳ ಆತ್ಮಮಿಲನವಾದ ಸಂದರ್ಭದಲ್ಲಿ ವಿಧುರನ ಅಥವಾ ವಿಧವೆಯ ಪುನರ್ವಿವಾಹದ ವಿಚಾರಕ್ಕೆ ಅಲ್ಲಿ ಆಸ್ಪದವೆ ಉಳಿಯಲಾರದು. ಒಂದುವೇಳೆ ಇದ್ದರೆ ಅದು ಅನುಚಿತ ; ಅಲ್ಲದೆ ಪ್ರಮಾದವೂ ಅಹುದು.

ಅದೇ ಲೇಖನದಲ್ಲಿ ಇನ್ನೊಂದೆಡೆ ಹೀಗೆ ಹೇಳಿದೀರಿ—'ವಿಧವಾ ಕುಮಾರಿಯರ ಪುನರ್ವಿವಾಹವಾಗಬೇಕೆಂಬುದು ಇಷ್ಟವಿಷ್ಟೇ ಅಲ್ಲ, ಅದು ಕುಮಾರಿವಿಧವೆಯರ ತಂದೆತಾಯಿಂದಿರ ಆದ್ಯಕರ್ತವ್ಯವೆಂದೆ ನಾನು ತಿಳಿದಿದ್ದೇನೆ.'

ಈ ಎರಡೂ ದೃಷ್ಟಿಗಳನ್ನು ನೀವು ಹೇಗೆ ಮೇಳವಿಸುವಿರಿ ? "

ಈ ಎರಡೂ ವಿಚಾರಗಳನ್ನು ಮೇಳವಿಸಲು ನನಗೆ ಯಾವ ತೊಂದರೆಯೂ ಇಲ್ಲ. ಹೃದಯಹೀನ ಅಥವಾ ಅಜ್ಞ ತಾಯಿತಂದೆಗಳು ತಮ್ಮ ಬಾಲಿಕೆಯರನ್ನು ಅವರ ಅರಿವಿಲ್ಲದೆ, ಅವರ ಒಪ್ಪಿಗೆಯಿಲ್ಲದೆ, ಅವರ ಹಿತಾಹಿತ ಲಕ್ಷಿಸದೆ ಲಗ್ನಮಾಡಿಕೊಟ್ಟರೆ, ಅದು ನಿಜವಾದ ಮದುವೆ ಯೆಂದೆನಿಸಲಾರದು. ಅದು ಪವಿತ್ರ ಸಂಸ್ಕಾರವಾಗದ್ದರಿಂದ ಇಂಥ ಬಾಲಿಕೆಯರ ಪುನರ್ವಿವಾಹ ಒಂದು ಕರ್ತವ್ಯವೆ ಸರಿ. ಅಲ್ಲದೆ ನಿಜವಾಗಿ ವಿಚಾರಮಾಡಿದರೆ ಅದನ್ನು 'ಪುನರ್ವಿವಾಹ' ವೆಂದು ಕರೆವುದೂ ಅಪರಾಧವೆ ಸೈ. ವೈವಾಹಿಕ ದೃಷ್ಟಿಯಿಂದ ಆ ಹುಡುಗೆಯ ಲಗ್ನವಾದಂತೆಯೆ ಅಲ್ಲ. ಆದುದರಿಂದ ಅವಳ ಗಂಡನೆಂಬ ವ್ಯಕ್ತಿಯ ಮರಣದನಂತರ ಅವಳಿಗಾಗಿ ಜೀವನದ ಯೋಗ್ಯಸಂಗಾಡಿಗನನ್ನು ಒದಗಿಸುವುದು ತಂದೆತಾಯಿಗಳ ಕರ್ತವ್ಯವೆ ಸರಿ.

ಯಂಗ್ ಇಂಡಿಯಾ, ೨೬-೯-೧೯೨೯.

# " ಸ್ತ್ರೀಯರನ್ನು ಮುಕ್ತಗೊಳಿಸಿ "

[ಹೆಂಗುಸರನ್ನು ದುರ್ಲಕ್ಷಿಸಿದುದಕ್ಕೆ — ಅಲ್ಲಲ್ಲ— ದುರುಪಯೋಗಿಸಿಕೊಂಡು ದಕ್ಕೆ ಪುರುಷರು ದೋಷಾರ್ಹರೆಂಬುದರಲ್ಲಿ ಸಂದೇಹವಿಲ್ಲ. ಆ ಬಗ್ಗೆ ಅವರು ಸಾಕಷ್ಟು ದಂಡ ತೆರಲೇಬೇಕು. ಆದರೆ, ಮೂಢತನದಿಂದ ಮುಕ್ತರಾಗಿ ಗಂಡಸರ ಅತ್ಯಾಚಾರಗಳನ್ನರಿತ ಸ್ತ್ರೀಯರು ಹೆಂಗುಸರ ಸುಧಾರಣೆಗಾಗಿ ರಚನಾತ್ಮಕ ಕಾರ್ಯ ಗಳನ್ನು ಮಾಡಲೇಬೇಕು.]

ಮದ್ರಾಸಿನ ಸುಪ್ರಸಿದ್ಧ ಸಮಾಜಸೇವಿಕೆಯರಾದ ಡಾ. ಮುತ್ತು ಲಕ್ಷ್ಮಿ ರೆಡ್ಡಿಯವರು ನನ್ನ ಆಂಧ್ರಭಾಷಣಗಳಲ್ಲೊಂದನ್ನು ಕುರಿತು ಸಿಡಿದಾದ ಓಲೆಯೊಂದನ್ನು ಬರೆದಿದಾರೆ. ಅದರ ಮಧುರಾಂಶವನ್ನು ಕೆಳಗೆ ಕೊಡುತಿದ್ದೇನೆ :

"ಬೆಜವಾಡದಿಂದ ಗುಂಟೂರುವರೆಗಿನ ನಿಮ್ಮ ಪಯಣದಲ್ಲಿ 'ನಮ್ಮ ಸುಧಾರಣೆಯ ಆವಶ್ಯಕತೆ ಹಾಗೂ ಜನತೆಯ ನಿತ್ಯಜೀವನದ ಆಚಾರ

ವಿಚಾರಗಳಲ್ಲಿ ಮಾರ್ಪಾಟಿನ ಆವಶ್ಯಕತೆ'ಯನ್ನು ಕುರಿತು ನೀವಿತ್ತ ಭಾಷಣ ನನ್ನ ಮನವನ್ನೆ ಸೂರೆಗೊಂಡಿತು.

ವೈದ್ಯಶಾಸ್ತ್ರ ಓದಿದ ನನ್ನ ಮತ್ತು ನಿಮ್ಮಲ್ಲಿ ಈ ವಿಷಯದಲ್ಲಿ ಮತ್ತೈಕ್ಯವಿದೆಯೆಂದು ನಾನು ವಿನೀತಳಾಗಿ ಒಪ್ಪುವೆ. ಶಿಕ್ಷಣದಿಂದ ಸಮಾಜ ಸುಧಾರಣೆ, ಶುಚಿತ್ವ, ಜನತೆಯ ಸುಸ್ವಾಸ್ಥ್ಯ ಇವುಗಳೆಲ್ಲ ನಿಜವಾಗಿಯೂ ಲಭಿಸುವುವೆಂಬಮೇಲೆ ನಮ್ಮ ಸ್ತ್ರೀಯರಿಗೆ ಶಿಕ್ಷಣವೀಯುವುದರಿಂದ ಈ ಎಲ್ಲ ಸುಧಾರಣೆಗಳನ್ನು ಸಾಧಿಸಬಹುದೆಂದು ನಾನು ಹೇಳಬಹುದಲ್ಲವೆ ?

ಸದ್ಯದ ಸಾಮಾಜಿಕ ಪರಿಸ್ಥಿತಿಯಲ್ಲಿ ಶಿಕ್ಷಣಪಡೆವ ಸೌಲಭ್ಯ, ದೈಹಿಕ, ಮಾನಸಿಕ ವಿಕಾಸಗಳಿಗೆ ಅವಕಾಶ, ತಮ್ಮ ವಿಚಾರ ವ್ಯಕ್ತಗೊಳಿಸಲು ಸ್ವಾತಂತ್ರ್ಯ ಇವು ತೀರ ಕೆಲವೆ ಸ್ತ್ರೀಯರಿಗೆ ಲಭಿಸುವುವೆಂಬುದನ್ನು ನೀವು ಅರಿಯಿರಾ ?

ಲೋಕರೂಢಿ ಹಾಗೂ ಸಾಂಪ್ರದಾಯಗಳಿಂದ ಸ್ತ್ರೀಯರ ವ್ಯಕ್ತಿತ್ವವು ನಿರ್ದಯತನದಿಂದ ತುಳಿಯಲ್ಪಡುತ್ತಿದೆಯೆಂಬುದು ನಿಮಗೆ ತಿಳಿಯದೆ ?

ದೈಹಿಕ, ಭೌತಿಕ, ಆಧ್ಯಾತ್ಮಿಕ ಮುಂತಾದ ಎಲ್ಲ ವಿಕಾಸಗಳ ತಾಯಿ ಬೇರಿಗೆ ಈ ಬಾಲ್ಯವಿವಾಹ ಕೊಡಲಿ ಏಟಲ್ಲವೆ ?

ಬಾಲಪತ್ನಿ, ಬಾಲಮಾತೆಯರ ವ್ಯಥೆ ಹಾಗೂ ವಿಧವೆಯರ, ತ್ಯಾಜ್ಯ ಪತ್ನಿಯರ ಅಸಹನೀಯ ದುಃಖದುಮ್ಮಾನಗಳ ನಿವಾರಣೋಪಾಯವನ್ನು ಕೈಗೊಳ್ಳುವ ಆವಶ್ಯಕತೆಯಿಲ್ಲವೆ ?

ಧಾರ್ಮಿಕ ಬಂಣ ಬಳಿದು ಎಳೆಗುವರಿಯರನ್ನು ಅನೀತಿಪರ, ಪತಿತ ಜೀವನಕ್ಕೆಳೆಯುವ ಸಂಪ್ರದಾಯವನ್ನು ಕಂಡೂಕಾಣದಂತೆ ಹಿಂದೂ ಸಮಾಜವು ಸುಮ್ಮನೆ ಸೈರಿಸುವುದು ನ್ಯಾಯಸಮ್ಮತವೆ ?

ಪ್ರಾಚೀನ ಭಾರತದಲ್ಲಿ ಮೈತ್ರೇಯಿ, ಗಾರ್ಗಿ, ಸಾವಿತ್ರಿಯರು ಆತ್ಮಸ್ಥೈರ್ಯ, ಆತ್ಮಬಲ, ಸ್ವತಂತ್ರವಿಚಾರಶಕ್ತಿ, ಸ್ವಕಾರ್ಯಪ್ರೇರಣಾಶಕ್ತಿ ಯುಳ್ಳವರಾಗಿದ್ದರು. ಈಗ ಬ್ರಹ್ಮಸಮಾಜ, ಆರ್ಯಸಮಾಜ, ಥಿಯೊಸೊಫಿಕಲ್ ಸಮಾಜಗಳ — ಇವೆಲ್ಲ ಸಮಾಜಗಳು ಹಿಂದೂಧರ್ಮದ

ಅಸಹ್ಯಸಂಪ್ರದಾಯ, ರೂಢಿ, ಕಟ್ಟಳೆಗಳಿಂದ ವಿಮೋಚನೆಗೊಂಡ ಹಿಂದೂ ಧರ್ಮಪಂಥಗಳೆ ಆಗಿವೆ—ಕೆಲ ವ್ಯಕ್ತಿಗಳನ್ನು ಬಿಟ್ಟರೆ ಉಳಿದೆಲ್ಲ ಹಿಂದೂ ಸ್ತ್ರೀಯರು ಈ ಸುಗುಣಗಳನ್ನು ಕಳೆದುಕೊಂಡಿದಾರೆಂದು ನಿಮಗೆ ಗೊತ್ತಿಲ್ಲವೆ ?

ನಮ್ಮ ಈಗಿನ ಶೋಚನೀಯ ಸ್ಥಿತಿಗೆ, ನಮ್ಮ ರಾಷ್ಟ್ರೀಯ ನಿಸ್ಸತ್ವಕ್ಕೆ ಕಾರಣೀಭೂತವಾದ ಈ ಸಾಮಾಜಿಕ ಅನಿಷ್ಟಗಳನ್ನು ನಿವಾರಿಸಲು ರಾಷ್ಟ್ರೀಯಪಕ್ಷದ ಸಭಾಸದರು ಅರ್ಥಾತ್ ಕಾಂಗ್ರೆಸಿಗರು ಹುರುಪಿನಿಂದ ಯಾವುದಾದರೊಂದು ಯೋಗ್ಯ ಉಪಾಯ ಕೈಗೊಳ್ಳಕೂಡದೆ ? ಕೊನೆಯ ಪಕ್ಷಕ್ಕೆ ದಾಸ್ಯಬಂಧನದಲ್ಲಿದ್ದ ಸ್ತ್ರೀಯರನ್ನು ಬಿಡುಗಡೆ ಮಾಡುವಂತೆ ಜನತೆಯಲ್ಲಿ ಪ್ರಚಾರವನ್ನಾದರೂ ಮಾಡಬಾರದೆ ? ಹೀಗಾದುದಾದರೆ ಸ್ತ್ರೀಯರು ದೈಹಿಕ, ಬೌದ್ಧಿಕ, ಆಧ್ಯಾತ್ಮಿಕ ಮುಂತಾದ ಸರ್ವದೃಷ್ಟಿಯಿಂದಲೂ ಪೂರ್ಣ ಬೆಳವಣಿಗೆ ಹೊಂದಬಹುದು. ಜನತೆಗೆ ಧೈರ್ಯದ, ಬುದ್ಧಿಮತ್ತೆಯ, ಆದರ್ಶದ ಉದಾಹರಣೆಗಳನ್ನು ತೋರಬಹುದು. ಎಲ್ಲಕ್ಕೂ ಮುಖ್ಯವಾಗಿ ಅವರು ನಿಜವಾದ ಸತಿಯರಾಗಿ, ಮಾತೆಯರಾಗಿ, ಭರತ ಭೂಮಿಯ ಭಾವೀ ಆಡಳಿತೆಗಾರರ ಶೀಲಚಾರಿತ್ರ್ಯಗಳಿಗೆ ರೂಪುಕೊಡುವ, ಅವರ ಕೈದೀವಿಗೆಯಾಗುವ, ಅವರಿಗೆ ಶಿಕ್ಷಣವೀಯುವ ಉದಾತ್ತ ಕಾರ್ಯಗಳನ್ನು ಮಾಡಬಹುದು.

'ಸ್ವಾತಂತ್ರ್ಯ ಪ್ರತಿಯೊಂದು ರಾಷ್ಟ್ರದ, ಪ್ರತಿಯೊಬ್ಬ ವ್ಯಕ್ತಿಯ ಜನ್ಮಸಿದ್ಧಹಕ್ಕು' ಎಂಬ ಮಾತಿನಲ್ಲಿ ಕಾಂಗ್ರೆಸ್ ಸಭಾಸದರ ವಿಶ್ವಾಸವಿದ್ದರೆ, ಎಂಥ ಪ್ರಸಂಗಬಂದರೂ ಅದನ್ನೆದುರಿಸಿ ಸ್ವಾತಂತ್ರ್ಯ ಸಾಧಿಸಲು ಅವರು ಪಣತೊಟ್ಟಿದ್ದರೆ, ಹೆಂಗುಸರ ಪೂರ್ಣವಿಕಾಸಕ್ಕೆ ತಡೆಯಾಗುವ ಅನಿಷ್ಟ ರೂಢಿಸಾಂಪ್ರದಾಯಗಳಿಂದ ಅವರನ್ನು ಮುಕ್ತಗೊಳಿಸುವುದು ಕಾಂಗ್ರೆಸಿಗರ ಪ್ರಥಮ ಕಾರ್ಯವಲ್ಲವೆ ?

ನಮ್ಮ ಕವಿಗಳು, ಋಷಿಗಳು, ಸನ್ಯಾಸಿಗಳು ಎಲ್ಲರೂ ಇದನ್ನೆ ಒಡನುಡಿದಿದಾರೆ. ಸ್ವಾಮಿ ವಿವೇಕಾನಂದರು ಹೀಗೆ ಹೇಳಿದಾರೆ: 'ಯಾವ ದೇಶ, ಯಾವ ರಾಷ್ಟ್ರ ಸ್ತ್ರೀಯರನ್ನು ಗೌರವವಾಗಿ ಕಾಣುವುದಿಲ್ಲವೊ ಅದು

ಎಂದೆಂದಿಗೂ ಉನ್ನತಿಯನ್ನು ಹೊಂದಿಲ್ಲ; ಹೊಂದಲಾರದು. ನಿಮ್ಮ ಪೀಳಿಗೆ ಇಂಥ ಅವನತಿಗಿಳಿಯಲು ಕಾರಣವೇನೆಂದರೆ, ಶಕ್ತಿಮಾತೆಯ ಜೀವಂತಪ್ರತೀಕರಾದ ಈ ಸ್ತ್ರೀಯರನ್ನು ನೀವು ಪೂಜ್ಯಭಾವದಿಂದ ಕಾಣುತ್ತಿಲ್ಲ. ಆದಿಮಾತೆಯ ಸಾಕ್ಷಾತ್ಸ್ವರೂಪಿನಿಯರಾದ ಈ ಸ್ತ್ರೀಯರನ್ನು ನೀವು ಉದ್ಧರಿಸದಿದ್ದಲ್ಲಿ ನಿಮ್ಮ ಉದ್ಧಾರ ಬೇರಾವ ಬಗೆಯಿಂದಲೂ ಆಗಲಾರದೆಂದು ಖಚಿತವಾಗಿ ತಿಳಿಯಿರಿ.'

ತಮಿಳು ಕವಿಪುಂಗರಾದ ದಿವಂಗತ ಸುಬ್ರಹ್ಮಣ್ಯ ಭಾರತೀಯರೂ ಅದೇ ವಾಣಿಯಿಂದ ಹಾಡಿದಾರೆ.

ಆದುದರಿಂದ ಜನತೆಗೆ ಸ್ವಾತಂತ್ರ್ಯವೀಯುವ ಈ ಸತ್ಯ, ಸರಲ ಮಾರ್ಗವನ್ನನುಸರಿಸಲು ನೀವು ನಿಮ್ಮ ಪಯಣದಲ್ಲಿ ಬೋಧಿಸುವಿರಾ ? "

ಕಾಂಗ್ರೆಸಿಗರು ಈ ಹೊಣೆ ಹೊರಬೇಕೆಂಬ ಅಭಿಪ್ರಾಯ ತಳೆಯಲು ಡಾ. ಮುತ್ತುಲಕ್ಷ್ಮಿಯವರಿಗೆ ಪೂರ್ಣ ಹಕ್ಕಿದೆ. ಅನೇಕ ಕಾಂಗ್ರೆಸಿಗರು ಈ ದೆಸೆಯಲ್ಲಿ ವೈಯಕ್ತಿಕವಾಗಿಯೂ ಸಾಂಘಿಕವಾಗಿಯೂ ಮಹಾಕಾರ್ಯ ಮಾಡುತಿದ್ದಾರೆ. ಆದರೆ, ಈ ಅನಿಷ್ಟದ ಬೇರುಗಳು ಮೇಲ್ನೋಟಕ್ಕೆ ತೋರುವುದಕ್ಕಿಂತ ಹೆಚ್ಚು ಆಳವಾಗಿ ಬೇರೂರಿವೆ. ನಮ್ಮಲ್ಲಿ ಸ್ತ್ರೀಯರ ಶಿಕ್ಷಣಕ್ರಮ ಮಾತ್ರ ದೋಷಪೂರಿತವಾದುದಲ್ಲ ; ಸಮಗ್ರ ಶಿಕ್ಷಣಕ್ರಮವೇ ದೋಷಪೂರಿತವಾಗಿದೆ ಅಲ್ಲೊಂದು ರೂಢಿ, ಇಲ್ಲೊಂದು ಸಂಪ್ರದಾಯ ಮಾತ್ರ ನಿಂದಾರ್ಹವಲ್ಲ. ಈ ರೂಢಿಸಂಪ್ರದಾಯಗಳಿಂದ ಕೇಡುಂಟಾಗಿದೆಯೆಂದು ನಾವು ಅರಿತಿದ್ದೇವೆ. ಆದರೂ ಅವುಗಳ ನಿವಾರಣೆಯ ಪ್ರಯತ್ನವೇ ಇಲ್ಲ. ಅಂಥ ಜಡತ್ವ ನಮ್ಮಲ್ಲಿ ಮನೆಮಾಡಿಕೊಂಡಿದೆ. ಅದನ್ನು ನಾವು ಹೊಡೆದೋಡಿಸಬೇಕಾಗಿದೆ. ಮಧ್ಯಮವರ್ಗದವರು ಮತ್ತು ಪಟ್ಟಣ ನಿವಾಸಿಗಳು, ಎಂದರೆ ಭರತನಿವಾಸಿಗಳ ಪ್ರತಿ ಶತಕಗಳಲ್ಲಿ ೧೫ ಜನ ಮಾತ್ರ ಈ ದೋಷಕ್ಕೆ ಪ್ರಮುಖ ಕಾರಣರು. ಹಳ್ಳಿಗಳಲ್ಲಿ ಬಹುಶಃ ಬಾಲ್ಯ ವಿವಾಹವೂ ಇಲ್ಲ, ವಿಧವಾ ವಿವಾಹಗಳಿಗೆ ನಿಷೇಧವೂ ಇಲ್ಲ. ಅವರ ಜೀವನವಿಕಾಸಕ್ಕೆ ಕಂಟಕಪ್ರಾಯವಾದ ಬೇರೆ ಕುಂದುಗಳಿವೆಂಬುದನ್ನು ನಾನು ಒಪ್ಪುವೆ. ಆದರೆ ಈ ಜಡತ್ವಮಾತ್ರ ಇಬ್ಬರಿಗೂ ಅಂಟಿಕೊಂಡಿದೆ.

ಪ್ರಚಲಿತ ಶಿಕ್ಷಣಕ್ರಮವನ್ನು ಪುನಃ ಪರಿಶೀಲಿಸಿ ಜನಸಾಮಾನ್ಯರಿಗೆ ಒಗ್ಗುವ ಶಿಕ್ಷಣಕ್ರಮ ಏರ್ಪಡಿಸುವುದು ಅಗತ್ಯ. ಚಿಕ್ಕ ಮಕ್ಕಳ ಶಿಕ್ಷಣಕ್ಕೆ ಕೊಡುವಂತೆಯೇ ಪ್ರಬುದ್ಧರಾದ ವಯಸ್ಕರ ಶಿಕ್ಷಣಕ್ಕೂ ಅಷ್ಟೆ ಮಹತ್ವ ಕೊಡದ ಯಾವ ಶಿಕ್ಷಣಕ್ರಮವೂ ಸಫಲವಾಗದು. ಅಲ್ಲದೆ ತಾಯನುಡಿಗೆ ಮೊದಲಸ್ಥಾನ ವಿಾಸಲಾಗಿಸದ ಯಾವ ಶಿಕ್ಷಣಕ್ರಮವೂ ಶಿಕ್ಷಣದ ಗುರಿಯ ಹೊರ ಅಂಚನ್ನೂ ಮುಟ್ಟದು. ಈ ಕಾರ್ಯ ಈಗ ಸಶಿಕ್ಷಿತೆಯರಾದ ಹೆಣ್ಣುಮಕ್ಕಳಿಂದಲೆ ನೀಗುವಂತಹದು. ದೊಡ್ಡ ಪ್ರಮಾಣದಿಂದ ಸುಧಾರಣೆ ಮೊದಲಿಸುವ ಮೊದಲು ಸುಶಿಕ್ಷಿತವರ್ಗದ ಮನೋವೃತ್ತಿ ಮಾರ್ಪಡಿಸುವುದೂ ಆವಶ್ಯಕ. ಸುಶಿಕ್ಷಣ ಪಡೆದ ಈ ಭಾರತಮಹಿಳೆಯರು 'ಪಾಶ್ಚಾತ್ಯ ಗಿರಿಶಿಖರದಿಂದ ಭಾಗತದ ತಪ್ಪಲುಭೂಮಿಗೆ ಇಳಿದುಬರಬೇಕೆಂದು ನಾನು ಡಾ. ಮುತ್ತುಲಕ್ಷ್ಮಿಯರಿಗೆ ನಮ್ರವಾಗಿ ಸೂಚಿಸಬಹುದೆ? ಹೆಂಗುಸರನ್ನು ದುರ್ಲಕ್ಷಿಸಿದುದಕ್ಕೆ — ಅಲ್ಲಲ್ಲ— ದುರುಪಯೋಗಿಸಿಕೊಂಡುದಕ್ಕೆ ಪುರುಷರು ದೋಷಾರ್ಹರೆಂಬುವುದರಲ್ಲಿ ಸಂದೇಹವಿಲ್ಲ, ಆ ಬಗ್ಗೆ ಅವರು ಸಾಕಷ್ಟು ದಂಡ ತೆರಲೇಬೇಕು. ಆದರೆ, ಮೂಢತನದಿಂದ ಮುಕ್ತರಾಗಿ ಗಂಡಸರ ಅತ್ಯಾಚಾರಗಳ ಅರಿವಿದ್ದ ಸ್ತ್ರೀಯರು ಹೆಂಗುಸರ ಸುಧಾರಣೆಗಾಗಿ ರಚನಾತ್ಮಕಕಾರ್ಯಗಳನ್ನು ಮಾಡಲಿಬೇಕು. ಸ್ತ್ರೀಯರ ಸ್ವಾತಂತ್ರ್ಯ, ಭಾರತ ಸ್ವಾತಂತ್ರ್ಯ, ಅಸ್ಪೃಶ್ಯತಾನಿವಾರಣೆ, ಜೋರೆಗೌಡನ ಶೋಚನೀಯ ಆರ್ಥಿಕಸ್ಥಿತಿಯ ಸುಧಾರಣೆ— ಈ ಎಲ್ಲ ಸುಧಾರಣೆಗಳಿಗೆ ಒಂದೇ ಮೂಲಮಂತ್ರವಿದೆ. ಅದೆಂದರೆ, ನಾವು ಗ್ರಾಮಗಳಿಗೆ ವಲಸೆಹೋಗಿ ಹಳ್ಳಿಯಜೀವನದ ಪುನರ್ಘಟನೆ ಅಥವಾ ಪುನರುಜ್ಜೀವನ ಮಾಡುವುದು.

ಯಂಗ್ ಇಂಡಿಯಾ, ೨೩—೫—೧೯೨೯.

# “ ಪತಿತ ಸೋದರಿಯರು ”

[ ಯಾವ ಯಾವ ಪಾಪಕೃತ್ಯಗಳಿಗೆ ಪುರುಷನು ಹೊಣೆಯಾಗಿದ್ದಾನೊ ಅವುಗಳಲ್ಲೆಲ್ಲ, ತನ್ನ ಅರ್ಧಾಂಗಿನಿಯಾದ ಸ್ತ್ರೀ (ಅವಳನ್ನು ಅಬಲೆಯೆಂದೆನಬೇಡಿ) ಯನ್ನು ದುರುಪಯೋಗಿಸಿಕೊಂಡ ಪಾಪಕೃತ್ಯ ಅತ್ಯಂತ ಹೇಯವಾದುದು, ತಲ್ಲಣಗೊಳಿಸುವಂತಹದು ಮತ್ತು ಪಶುಪ್ರಾಯವಾದುದು.]

ತಮ್ಮ ಮಾನವನ್ನು ಮಾರಿ ಹೊಟ್ಟೆಹೊರಕೊಳ್ಳುವ ಸ್ತ್ರೀಯರನ್ನು ನಾನು ಮೊದಲಬಾರಿ ಸಂದರ್ಶಿಸಿದುದು ಆಂಧ್ರದೇಶದ ಕೊಕೋನಾಡಿನಲ್ಲಿ. ಅಲ್ಲಿ ನಾಲ್ಕಾರು ಸ್ತ್ರೀಯರೊಡನೆ ಒಂದು ಕ್ಷಣಕಾಲ ಸಂಭಾಷಿಸಿದೆ. ಎರಡನೆಯ ಸಲ ಆ ಜನರನ್ನು ಕಂಡುದು ಬಾರಿಸಾಲಿನಲ್ಲಿ. ಮೊದಲೆ ನಿರ್ದಿಷ್ಟವಾದ ವೇಳೆಗೆ ನೂರುಜನಕ್ಕೆ ಮೇಲ್ಪಟ್ಟ ಆ ಸ್ತ್ರೀಯರು ನನ್ನನ್ನು ಸಂದರ್ಶಿಸಿದರು. ಆ ಪೂರ್ವದಲ್ಲಿಯೆ ಅವರು ನನಗೊಂದು ಓಲೆ ಬರೆದು ಸಂದರ್ಶನಕ್ಕಾಗಿ ಅಪ್ಪಣೆ ಕೇಳಿದ್ದರು. ಅಲ್ಲದೆ ‘ ನಾವು ಕಾಂಗ್ರೆಸಿನ ಸಭಾಸದರಾಗಿದೇವೆ. ಟಿಳಕ ಸ್ವರಾಜ್ಯಫಂಡಿಗಾಗಿ ಕಾಣಿಕೆ ಕೊಟ್ಟಿದೇವೆ. ಆದರೆ ನಾವು ಕಾಂಗ್ರೆಸ್ ಕಮಿಟಿಯ ಯಾವ ಕ್ಷೇತ್ರದ ಅಧಿಕಾರ ಪದವನ್ನೂ ಸ್ವೀಕರಿಸಬಾರದಾಗಿ ತಾವು ಉಪದೇಶಿಸಿದ್ದೀರಿ. ಇದು ನಮಗೆ ಅರ್ಥವಾಗುವುದಿಲ್ಲವಲ್ಲ’ ಎಂದು ಬರೆದು ಕೊನೆಯಲ್ಲಿ ‘ ನಮ್ಮ ಭವಿಷ್ಯ ಹಿತಚಿಂತನೆಗಾಗಿ ತಮ್ಮ ಉಪದೇಶಾಮೃತ ಪಡೆಯಲು ಆತುರರಾಗಿದೇವೆ’ ಯೆಂಬುದಾಗಿ ಬರೆದಿದ್ದರು. ನನ್ನ ಕೈಯಲ್ಲಿ ಪತ್ರವಿತ್ತ ಸದ್ಗೃಹಸ್ಥರು ಅತ್ಯಂತ ಅನುಮಾನದಿಂದ ಪತ್ರವಿತ್ತರು. ಅವರಿಗೆ ದುಗುಡ—ಆ ಪತ್ರದಿಂದ ನಾನು ಸಂತೋಷಗೊಳ್ಳುವೆನೊ, ಕೋಪಗೊಳ್ಳುವೆನೊ ಎಂದು. ‘ ಯಾವರೀತಿಯಿಂದಲೆ ಆಗಲಿ ಸೇವೆಗೈಯಲು ನನಗೆ ಸಾಧ್ಯವಿದ್ದರೆ ಆ ಸಹೋದರಿಯರ ಸೇವೆ ಮಾಡುವುದೂ ನನ್ನ ಕರ್ತವ್ಯ’ ಎಂದು ಆ ಸದ್ಗೃಹಸ್ಥರನ್ನು ನಾನು ಸಂತೈಸಿದೆ.

ಈ ಸಹೋದರಿಯರೊಂದಿಗೆ ಕಳೆದ ಆ ೨ ಗಂಟೆಕಾಲ ನನಗೆ ಚಿರಸ್ಮರಣೀಯವಾದ ಅಮೂಲ್ಯವಾದ ಸ್ಮೃತಿ. ೨೦,೦೦೦ ಜನವಸತಿ ಯಲ್ಲಿ ತಾವು ೩೫೦ ಜನ ಎಂಬುದಾಗಿ ಅವರು ನನಗೆ ಹೇಳಿದರು. ಈ ಸ್ತ್ರೀಯರು ಬಾರಿಸಾಲಿನ ಪುರುಷರ ಅಪವಿತ್ರತೆಯ ಚಿಹ್ನ. ಬಾರಿಸಾಲಿನ ಜನರು ಅದನ್ನೆಷ್ಟುಬೇಗ ಕೊನೆಗಾಣಿಸುವರೊ ಅಷ್ಟು ಆ ಜನರಿಗೆ ಶ್ರೇಯಸ್ಸು. ಈ ಪರಿಸ್ಥಿತಿಯಂತೆಯೆ ಉಳಿದೆಲ್ಲ ನಗರಗಳ ಪರಿಸ್ಥಿತಿಯೆಂದು ನಾನು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಇಲ್ಲಿ ಬಾರಿಸಾಲನ್ನು ಕೇವಲ ಉದಾಹರಣೆರೂಪವಾಗಿ ಕೊಂಡಿದೇನೆ ಮಾತ್ರ. ಈ ಸಹೋದರಿ ಯರ ಸೇವೆಗೈಯಬೇಕೆಂಬ ವಿಚಾರದ ಶ್ರೇಯ ಅಲ್ಲಿಯ ಕೆಲ ಯುವಕರಿಗೆ ಸಲ್ಲಬೇಕು. ಅಲ್ಲದೆ ಈ ಅನಿಷ್ಟವನ್ನು ತೊಡೆದುಹಾಕಿದ ಮೊದಲ ಶ್ರೇಯಸ್ಸು ಬಾರಿಸಾಲಿನ ಜನ ಪಡೆದುಕೊಳ್ಳುವಂತಾಗಲಿ ಎಂದು ನನ್ನ ಬಯಕೆ.

ಯಾವ ಯಾವ ಪಾಪಕೃತ್ಯಗಳಿಗೆ ಪುರುಷನು ಹೊಣೆಯಾಗಿದ್ದಾನೊ, ಅವುಗಳಲ್ಲೆಲ್ಲ ತನ್ನ ಅರ್ಧಾಂಗಿನಿಯಾದ ಸ್ತ್ರೀಯನ್ನು—ಅವಳನ್ನು ಅಬಲೆ ಯೆಂದೆನಬೇಡಿ—ದುರುಪಯೋಗಿಸಿಕೊಂಡ ಪಾಪಕೃತ್ಯ ಎಲ್ಲಕ್ಕೂ ಹೇಯ ವಾದುದು, ತಲ್ಲಣಗೊಳಿಸುವಂತಹದು ಮತ್ತು ಪಶುಪ್ರಾಯವಾದುದು. ಈ ಜೋಡಿಯಲ್ಲಿ ಸ್ತ್ರೀಯೆ ಉದಾತ್ತಳು. ಏಕೆಂದರೆ, ಅವಳು ತ್ಯಾಗದ ಪ್ರತ್ಯಕ್ಷ ಮೂರ್ತಿ; ಮೂಕಸಹನೆಯ, ದೈನ್ಯದ, ಶ್ರದ್ಧೆಯ, ಜ್ಞಾನದ ಪುತ್ಥಳಿ. ತಾನೆ ಮೇಧಾವಿಯೆಂದು ಹೊಗಳಿಕೊಳ್ಳುವ ಪುರುಷನ ಉದ್ದಾಮ ಬುದ್ಧಿ ಮತ್ತೆಗಿಂತ ಸ್ತ್ರೀಯ ಸಹಜ ಪ್ರೇರಣೆ (Intuition) ಒಂದು ತೂಕ ಹೆಚ್ಚು ಎಂದು ಎಷ್ಟೊ ಸಲ ಪ್ರಮಾಣಿಕವಾಗಿದೆ. ರಾಮನಿಗಿಂತ ಮೊದಲು ಸೀತೆ, ಕೃಷ್ಣನ ಮೊದಲು ರಾಧೆಯ ಹೆಸರನ್ನುಚ್ಚರಿಸುವುದರಲ್ಲಿ ಒಂದು ವಿಶಿಷ್ಟಾರ್ಥವಿದೆ. ಈ ಪಾಪಕ್ರೀಡೆ ನಮ್ಮ ಜೀವನ ವಿಕಾಸಕ್ಕೆ ಅತ್ಯವಶ್ಯ ವಾದುದು. ಅಲ್ಲದೆ ಅದಕ್ಕೆ ಮಹತ್ವದ ಸ್ಥಾನವಿದೆ. ಏಕೆಂದರೆ, ಇದು ಸರ್ವ ಪ್ರಚಲಿತವಾಗಿದೆ. ಮೇಲಾಗಿ ಐರೋಪ್ಯ ನಾಗರಿಕರಾಷ್ಟ್ರಗಳಲ್ಲಿ ಕೆಲವು ಸರಕಾರಗಳೆ ಇದಕ್ಕೆ ಪುರಸ್ಕಾರವಿತ್ತಿವೆ' ಎಂಬ ನಂಬುಗೆಯಲ್ಲಿ ಭ್ರಾಂತಿಗೀಡಾಗುವುದು ಬೇಡ. ಭಾರತವರ್ಷದಲ್ಲೂ ಇಂಥ ದೃಷ್ಟಾಂತ ಗಳಾಗಿವೆಂಬ ಆಧಾರದಿಂದ ನಾವು ಆ ಅಶ್ಲೀಲವನ್ನು ಬೆಳೆಯಗೊಡುವುದು

ಬೇಡ. ಸತ್ಯಾಸತ್ಯತೆಗಳ, ಒಳಿತುಕೆಡಕುಗಳ ವಿಮರ್ಶಾತ್ಮಕ ಬುದ್ಧಿ ಕುಂಠಿತವಾದೊಡನೆಯೆ ನಮ್ಮ ಏಳಿಗೆ ಕೊನೆಗೊಂಡಂತೆಯೆ ಸೈ. ನಮ್ಮ ಪೂರ್ವಜರ ಘನವಾದ, ಉದಾತ್ತವಾದ ವಿಷಯಗಳ ಬಗ್ಗೆ ಅವರ ಉತ್ತರಾಧಿಕಾರಿಗಳಾದ ನಮಗೆ ತುಂಬಾ ಹೆಮ್ಮೆ. ಅವರ ತಪ್ಪುತಡೆಗಳನ್ನು ಗಣಿಸಿ, ಆ ಉತ್ತರದಾಯಿತ್ವವನ್ನು ನಾವು ತಿರಸ್ಕಾರಕ್ಕೆಡೆಮಾಡದಿರೋಣ. ಸ್ವಾಭಿಮಾನಿಶಾಲಿಯಾದ ಭಾರತದಲ್ಲಿ ತನ್ನ ಸಹೋದರಿಯರ ಶೀಲರಕ್ಷಣೆ ತನಗೆಷ್ಟು ಸಂಬಂಧವೊ ಹಾಗೆಯೆ ಪ್ರತಿಯೊಬ್ಬ ಸ್ತ್ರೀಯ ಶೀಲರಕ್ಷಣೆ ತನಗೆ ಸಂಬಂಧವೆಂದು ಜನತೆ ಗಣಿಸಕೂಡದೆ? ಭರತಭೂಮಿಯ ನಿವಾಸಿಗಳೆಲ್ಲರೂ ಬಂಧುಭಗಿನಿಯರೆಂದು ಅರಿತುಕೊಳ್ಳುವುದೆ ಸ್ವರಾಜ್ಯದ ಒಳಗುಟ್ಟು.

ಆದುದರಿಂದಲೆ ಪುರುಷನಾದ ನಾನು ಈ ಸ್ತ್ರೀಯೆದುರು ತಲೆ ತಗ್ಗಿಸಬೇಕಾಗಿದೆ. ಬಾರಿಸಾಲಿನ ಈ ಸ್ತ್ರೀಯರಲ್ಲಿ ಕೆಲವರು ಮಾತ್ರ ವಯಸ್ಸಾದವರು; ಅನೇಕರು ೨೦-೩೦ ವರ್ಷಗಳ ಒಳಹೊರಗಿನವರು. ಇಬ್ಬರು ಮೂವರು ೧೨ ವರ್ಷದ ಕೆಳಗಿನ ಚಿಕ್ಕಬಾಲಿಕೆಯರು. ಅವರಿಗೆಲ್ಲರಿಗೂ ಕೂಡಿ ೬ ಹೆಂಣು, ೪ ಗಂಡುಮಕ್ಕಳಿವೆಯೆಂದೂ ಅವರಲ್ಲಿ ಹಿರಿಯವಳನ್ನು ತಮ್ಮ ಬಳಗದವರಲ್ಲಿಯೆ ಮದುವೆಮಾಡಿದ್ದರಾಗಿಯೂ ಹೇಳಿದರು. ಯಾವುದಾದರೊಂದು ಉಪಾಯ ಕೈಗೊಳ್ಳದಿದ್ದರೆ ಈ ಹುಡುಗೆಯರೂ ತಮ್ಮ ಪೂರ್ವಜರ ವೃತ್ತಿಹಿಡಿಯುವರೆಂದೂ, ತಮ್ಮ ಹಣೆಯಬರಹ ಬ್ರಹ್ಮಲಿಪಿಯೆಂದೂ, ಅದನ್ನು ತಿದ್ದುವುದು ಯಾರಿಂದಲೂ ಅಸಾಧ್ಯವೆಂದೂ ಅವರು ಭಾವಿಸಿದಾರೆ. ಇದನ್ನು ಕೇಳಿ ನನ್ನ ಹೃದಯದಲ್ಲಿ ಶೂಲವಿಕ್ಕಿದಂತಾಗಿದೆ. ಅವರು ತೀಕ್ಷ್ಣಬುದ್ಧಿಯುಳ್ಳವರು, ಸಭ್ಯನಡತೆಯುಳ್ಳವರು. ಅವರು ಸೌಜನ್ಯದಿಂದ ಮಾತನಾಡುತಿದ್ದರು; ನೇರವಾಗಿ ಡೊಕ್ಕಾಗಿ ಉತ್ತರವೀಯುತಿದ್ದರು. ಅಲ್ಲದೆ ಆಗಿನ ಅವರ ನಿರ್ಧಾರ ಸತ್ಯಾಗ್ರಹಿಯಷ್ಟೆ ನಿಶ್ಚಲವಾದುದು. ಸಹಾಯ ದೊರೆತರೆ ಮಾರನೆಯ ದಿನದಿಂದಲೆ ತಮ್ಮ ವೃತ್ತಿಗೆ ತಿಲಾಂಜಲಿಯಿತ್ತು ನೇಯುವ, ಹಿಂಜುವ ಉದ್ಯೋಗಗಳಿಂದ ತಮ್ಮ ಜೀವನ ಹೊರೆಯುಕೊಳ್ಳುವುದಾಗಿ ಅವರಲ್ಲಿ ಹನ್ನೊಂದು ಜನ ಹೆಂಗುಸರು ಅಗಲೆ ಪಣತೊಟ್ಟರು. ಉಳಿದವರು 'ನಾವು ಈ ಬಗ್ಗೆ

ವಿಚಾರಮಾಡುವೆವು. ಏಕೆಂದರೆ, ನಾವು ನಿಮ್ಮನ್ನು ಮೋಸಗೊಳಿಸಲಿಚ್ಛಿಸುವುದಿಲ್ಲ' ಎಂದು ಹೇಳಿದರು.

ಬಾರಿಸಾಲಿನ ನಿವಾಸಿಗಳಿಗೆ ಸೇವಾಕಾರ್ಯಮಾಡಲು ಇಲ್ಲಿ ಸಾಕಷ್ಟು ಅನುವಿದೆ. ಗಂಡಾಗಲಿ, ಹೆಂಣಾಗಲಿ ಭಾರತದ ನಿಜಸೇವಕರಿಗೆ ಸೇವೆಗೈಯಲು ಇಲ್ಲಿ ಸಾಕಷ್ಟು ಕಾರ್ಯಗಳಿವೆ. ೨೦,೦೦೦ ಜನವಸತಿಯುಳ್ಳ ನಗರದಲ್ಲಿ ೩೫೦ ಜನ ದುರ್ದೈವಿ ಭಗಿನಿಯರಿದ್ದರೆ ಭರತಖಂಡದಲ್ಲಿ ೫೨,೫೦,೦೦೦ ಇಂಥ ಜನರಿರಬೇಕಾಯಿತು ಆದರೆ ಭಾರತಜನಾಂಗದ ಐವರಲ್ಲಿ ನಾಲ್ವರು ಹಳ್ಳಿಯಲ್ಲಿ ವಾಸಿಸುವರು ಈ ಜನ ಒಕ್ಕಲುತನದಿಂದ ಜೀವಿಸುವವರು. ಅವರಿಗೆ ಇಂಥ ದುರ್ಗುಣಗಳು ಸೋಂಕಲಾರವೆಂದು ನಾನು ಹೊಗಳಿಕೊಳ್ಳುತಿದ್ದೇನೆ ಆದರೂ ತಮ್ಮ ಮಾನಮಾರಿ ಬದುಕುಸಾಗಿಸುವ ಸ್ತ್ರೀಯರ ಸಂಖ್ಯೆ ಅತಿ ಕಡಮೆಯೆಂದರೂ ೧೦,೫೦,೦೦೦ ಇರಬೇಕು. ಈ ನಿರ್ಭಾಗ್ಯ ವನಿತೆಯರನ್ನು ಹೀನಸ್ಥಿತಿಯಿಂದ ಉದ್ಧರಿಸುವ ಮೊದಲು ಎರಡು ಕೆಲಸಗಳನ್ನು ನಾವು ಪೂರ್ಣಗೈಯಬೇಕು. ಮೊದಲನೆಯದಾಗಿ, ಗಂಡಸರಾದ ನಾವು ಕಾಮವಾಸನೆಯನ್ನು ನಿಗ್ರಹಿಸಬೇಕು. ಎರಡನೆಯದಾಗಿ, ಈ ಸ್ತ್ರೀಯರು ಮರ್ಯಾದೆಯಿಂದ ಜೀವನ ಸಾಗಿಸುವಷ್ಟು ಕೂಲಿ ದೊರೆಯುವಂತೆ ಉಪಜೀವಿಕೆಯ ಮಾರ್ಗವನ್ನು ಕಲ್ಪಿಸಿಕೊಡಬೇಕು. ಅಸಹಕಾರ ಆಂದೋಲನದಿಂದ ನಾವು ಸಚ್ಚರಿತ್ರರಾಗಿದ್ದರೆ, ಆತ್ಮಸಂಯಮಿಗಳಾಗದಿದ್ದರೆ ಅದರಿಂದ ನಮಗೇನು ಲಾಭ? ಹಿಂಜುವ, ನೂಲುವ ಕ್ಷೇತ್ರದಲ್ಲಿ ಎಲ್ಲರಿಗೂ ಅವಕಾಶವಿದೆ. ಅಲ್ಲಿ ಎಲ್ಲರೂ ಸ್ವಾಗತಾರ್ಹರು. ಏಕೆಂದರೆ ಅಲ್ಲಿ ಮುಗ್ಗಟ್ಟಿನ ಭೀತಿಯೆ ಇಲ್ಲ. ಈ ಸ್ತ್ರೀಯರಲ್ಲಿ ಬಹುಜನ ಸ್ತ್ರೀಯರು ತಮ್ಮ ಮದುವೆಯ ಯೋಚನೆಯನ್ನೆ ಮಾಡಕೂಡದು. ಈ ವಿಚಾರಕ್ಕೆ ಅವರೂ ಅನುಮೋದನೆಯಿತ್ತಿದಾರೆ. ಅವರು ಹಿಂದೂಧರ್ಮದ ನಿಜವಾದ ಸನ್ಯಾಸಿನಿಯರಾಗಬೇಕು. ಸೇವಾಕಾರ್ಯಗಳಲ್ಲದೆ ಅವರಿಗೆ ಅನ್ಯಚಿಂತೆಗಳೆ ಇಲ್ಲ. ಆದುದರಿಂದ ಅವರು ಮನಸಾರೆ ನೂಲಬೇಕು, ನೇಯಬೇಕು. ೧೦,೫೦,೦೦೦ ಸ್ತ್ರೀಯರು ಶ್ರದ್ಧೆಯಿಂದ ನಿತ್ಯ ೮ ಗಂಟೆಕಾಲ ನೂಲುವುದೆಂದರೆ ದರಿದ್ರ ಹಿಂದೂಸ್ಥಾನಕ್ಕೆ ದಿನಂಪ್ರತಿ ಅಷ್ಟು ಹಣ ಉಳಿತಾಯವಾದಂತೆಯೆ ಸರಿ. ತಾವು ನಿತ್ಯ ಎರಡು ರೂಪಾಯಿಗಳವರೆಗೆ ಗಳಿಸುತ್ತಿದ್ದೆವಾಗಿ ಅವರು ಹೇಳಿದರು. ಆದರೆ ವಿಟ

ನನ್ನು ವಶಪಡಿಸಿಕೊಳ್ಳುವುದಕ್ಕಾಗಿ ಅನೇಕ ಬಗೆಯ ಒಯ್ಯಾರಕ್ಕಾಗಿ ವೆಚ್ಚ ಮಾಡಬೇಕಾಗುತ್ತಿತ್ತೆಂದೂ ಹೇಳಿದರು. ನೂಲುವ, ನೇಯುವ ಉದ್ಯೋಗಗಳಿಗೆ ಅವರು ತೊಡಗಿದರೆ ಪುನಃ ನಿಸರ್ಗಜೀವನಕ್ಕೆ ಹಿಂದಿರುಗಿದಂತಾಗಿ, ಒಯ್ಯಾರತನದ ವೆಚ್ಚವೆಲ್ಲವನ್ನೂ ಸುಲಭವಾಗಿ ತ್ಯಜಿಸಬಲ್ಲರು. ನಮ್ಮ ಸಂಭಾಷಣೆ ಮುಗಿಯುವುದರೊಳಗಾಗಿಯೇ, ತಮ್ಮ ಪಾಪಕೃತ್ಯಗಳಿಂದ ಮುಕ್ತಿಹೊಂದದೆ ಕಾಂಗ್ರೆಸ್ ಕಮಿಟಿಯ ಅಧಿಕಾರ ಪದದಲ್ಲಿ ತಾವೇಕೆ ಇರಬಾರದೆಂಬುದನ್ನು, ನಾನು ತುಟಿಬಿಚ್ಚದಿದ್ದರೂ, ತಾವಾಗಿಯೇ ಊಹಿಸಿಕೊಂಡರು. ಕಲುಷಿತ ಹೃದಯದಿಂದ, ಅಪವಿತ್ರ ಹಸ್ತಗಳಿಂದ ಯಾವ ವ್ಯಕ್ತಿಯೂ ಸ್ವರಾಜ್ಯದ ವೇದಿಕೆಯಮೇಲೆ ಕಾರ್ಯನಿರ್ವಹಣ ಮಾಡುವುದು ಸಾಧ್ಯವಿಲ್ಲ.

ಯಂಗ್ ಇಂಡಿಯಾ, ೧೫-೯-೧೯೨೧.

# " ಸ್ತ್ರೀಯರೂ ಆಭರಣಗಳೂ "

---

[" ಜನತೆಯಲ್ಲಿ ನೂರಕ್ಕೆ ಎಂಭತ್ತು ಜನ ಇಂದು ನಿಃಸತ್ತ್ವ ಆಹಾರವನ್ನುಣ್ಣುವಾಗ, ಹಾಗು ಲಕ್ಷಗಟ್ಟಲೆ ಜನರು ಈ ದೇಶದಲ್ಲಿ ಅರೆಹೊಟ್ಟೆಯಿಂದ ನರಳುವಾಗ, ಮುತ್ತು- ರತ್ನ - ವಜ್ರ - ವೈಡೂರ್ಯ-ಬೆಳ್ಳಿ - ಭಂಗಾರದ ಆಭರಣಗಳನ್ನು ಧರಿಸುವದೊಂದು ಅಪರಾಧವೇ ಎಂಬುದು ಕಣ್ಣಿಗೆ ಎದ್ದು ಕಾಣುವ ಮಾತಾಗಿದೆ. "]

ನಾನು ನನ್ನ ಹರಿಜನ ಯಾತ್ರೆಯ ಸಂಚಾರದಲ್ಲಿ ಸೋದರಿಯರಿಗೆ ಆಭರಣಗಳ ಕಾಣಿಕೆ ಕೊಡಿರೆಂದು ಕೇಳಿ, ಹಾಗೆ ಬಂದ ಕಾಣಿಕೆಗಳನ್ನು ಲಿಲಾವು ಮಾಡುವುದುಂಟಷ್ಟೆ. ಈ ನನ್ನ ಕೃತಿಯನ್ನು ಟೀಕಿಸಿ ಬರೆದ ವೃತ್ತಪತ್ರಿಕೆಯೊಂದರ ಒಂದು ಪರಿಚ್ಛೇದವನ್ನು ನಾನು ಪರಿಶೀಲಿಸಿದ್ದೇನೆ. ಸಭೆಗೆ ಬಂದ ಸಹಸ್ರಾರು ಸೋದರಿಯರು ತಾವು ಧರಿಸಿರುವ ವಸ್ತ್ರ ಒಡವೆಗಳಲ್ಲಿ ಎಲ್ಲವನ್ನೂ ಕೊಡದೆಹೋದರೂ ಬಹುಭಾಗವನ್ನಾದರೂ ಹರಿಜನ ನಿಧಿಗಾಗಿ ಕೊಡಬೇಕೆಂದು ನಾನು ನಿಜವಾಗಿಯೂ ಇಚ್ಛಿಸುತ್ತೇನೆ. ಜನತೆಯಲ್ಲಿ ನೂರಕ್ಕೆ ಎಂಭತ್ತು ಜನ ಇಂದು ನಿಃಸತ್ತ್ವ ಆಹಾರವನ್ನುಣ್ಣುವಾಗ

ಹಾಗು ಲಕ್ಷಗಟ್ಲೆ ಜನರು ಈ ದೇಶದಲ್ಲಿ ಅರೆಹೊಟ್ಟೆಯಿಂದ ನರಳುವಾಗ, ಮುತ್ತು-ರತ್ನ-ವಜ್ರ-ವೈಡೂರ್ಯ-ಬೆಳ್ಳಿ-ಭಂಗಾರದ ಆಭರಣಗಳನ್ನು ಧರಿಸುವದೊಂದು ಅಪರಾಧವೇ ಎಂದು ಕಣ್ಣಿಗೆ ಎದ್ದುಕಾಣುವ ಮಾತಾಗಿದೆ. ಹಿಂದುಸ್ಥಾನದ ಸ್ತ್ರೀಯು ಹತ್ತರ ಆಕೆಯದೆ ಆದ ಶೋಖುದ್ರವ್ಯವಿರುವದಿಲ್ಲವೆಂಬುದು ನಿಜವಾದರೂ ಆಕೆ ಧರಿಸುವ ಆಭರಣಗಳು ಸ್ತ್ರೀಧನವಾಗಿ ಬಂದು ಆಕೆಯ ಸೊತ್ತೇ ಆಗಿರುವದುಂಟು. ಇವನ್ನು ಕೂಡ ಆಕೆ ತನ್ನ ಸ್ವಾಮಿಯಾದ ಪತಿದೇವನ ಅಪ್ಪಣೆಯಿಲ್ಲದೆ ಯಾರಿಗೂ ಕೊಟ್ಟುಬಿಡಲಾರಳೆಂಬುದೂ ಆ ಧೈರ್ಯ ಅವಳಿಗೆ ಆಗುವದಿಲ್ಲವೆಂಬುದೂ ವಸ್ತುಸ್ಥಿತಿಯ ಮಾತು. ಆದರೂ ಸತ್ಕಾರ್ಯಕ್ಕಾಗಿ ತನ್ನದೆನ್ನುವ ಕೆಲವು ಒಡವೆಯನ್ನು ಆಕೆ ಕೊಟ್ಟು ಬಿಟ್ಟರೆ ಅದು ಅವಳಿಗೆ ಭೂಷಣವೇ ಸರಿ. ಇದಲ್ಲದೆ, ಈ ವಸ್ತುಒಡವೆಗಳಲ್ಲಿ ಹಲವು ಕಲಾದೃಷ್ಟಿಯಿಂದ ಸುಂದರ ವಸ್ತುಗಳೇ ಆಗಿರುವದಿಲ್ಲ. ಕೆಲವಂತೂ ವಿಕಾರಗೊಂಡ ಕುರೂಪವಸ್ತುಗಳೇ ಆಗಿರುವದುಂಟು ಅವನ್ನು ಧರಿಸುವದೆಂದರೆ ಮೈತುಂಬ ಧೂಳಿ ಬಡೆದುಕೊಂಡಂತೆ. ಕಡಗಗಳೂ ಕಂಕಣಗಳೂ ಕಂಠಿಗಳೂ ಭಾರವಾದವುಗಳಾಗಿರುವವು. ನಾಗರಹೆರಳು ಭಂಗಾರದಂಥ ತೊಡವುಗಳು ಕೂದಲುಗಳನ್ನು ಸರಿಪಡಿಸಿಕೊಳ್ಳುವದಕ್ಕಿಂತ ಎಷ್ಟೋಸಾರೆ ಬಾಚಿಕೊಳ್ಳದೆ ತೊಳೆದುಕೊಳ್ಳದೆ ಹೊಲಸುನಾರುವ ಕೂದಲಿಗೆ ಶೃಂಗಾರವಾಗಿ ವಿಜೃಂಭಿಸುವವು. ಮುಂಗೈಯಿಂದ ಮೊಳಕೈವರೆಗೆ ಸಾಲುಸಾಲಾಗಿ ಇರುವ ಬಳೆಗಳದೂ ಇದೇ ರೀತಿ. ಹೀಗೆ ಹೊರಲಾರದ ಹೊರೆಯಂತಿರುವ ಈ ದುಂದುವೆಚ್ಚದ ಆಭರಣ ತೊಡುವುದೊಂದು ದೇಶಕ್ಕೆ ಹಾನಿಯೆಂದೇ ನನ್ನ ಖಂಡಿತ ಮತ. ಅಷ್ಟೊಂದು ಧನವನ್ನು ಸೆರೆಯಲ್ಲಿ ಬಿಗಿದಿಟ್ಟಂತೆಯೇ ಸರಿ. ಇಷ್ಟೇ ಅಲ್ಲ, ಅದು ಸವೆದು ಸವೆದು ನಾಶವೂ ಆಗುವದುಂಟು. ಹರಿಜನೋದ್ಧಾರದ ಈ ಆತ್ಮಶುದ್ಧಿಯ ಅಂದೋಲನದಲ್ಲಿ ನಮ್ಮ ಸ್ತ್ರೀಯರಾಗಲಿ, ಪುರುಷರಾಗಲಿ ಕಾಣಿಕೆ ಕೊಡುವ ಆಭರಣಗಳಿಂದ ದೇಶಕ್ಕೆ ಲಾಭವೇ ಅಲ್ಲದೆ ಮತ್ತೇನೂ ಅಲ್ಲ. ಕೊಡುವ ದಾನಿಗಳು ಸಂತೋಷದಿಂದಲೇ ಕೊಡುತ್ತಾರೆ. ನನ್ನ ಒಂದೇ ಒಂದು ಕರಾರೆಂದರೆ, ಒಮ್ಮೆ ಕೊಟ್ಟುಬಿಟ್ಟಮೇಲೆ ಪುನಃ ಅಂಥ ಆಭರಣಗಳನ್ನು ಮಾಡಿಸಿ ಮತ್ತೆ ಮೈಮುಚ್ಚಿಕೊಳ್ಳಬಾರದು. ತಮ್ಮನ್ನು ಆಭರಣಗಳ ಶೃಂಖಲೆಯಿಂದ ಮುಕ್ತಮಾಡಿದಬಗ್ಗೆ ಎಷ್ಟೋ ಸ್ತ್ರೀಯರು

ನನ್ನನ್ನು ಹರಸಿದುದೂ ಉಂಟು. ಹಲವೊಂದು ಪ್ರಸಂಗಗಳಲ್ಲಿ ತಮ್ಮ ಮನೆಗಳಲ್ಲಿ ಸರಳ ಸಾದಾತನವು ನೆಲೆಯೂರಿ ಮನೆಮಾಡಿದ ಬಗ್ಗೆ ಎಷ್ಟೋ ಪುರುಷರು ನನಗೆ ಧನ್ಯವಾದಗಳನ್ನರ್ಪಿಸಿದುದೂ ಉಂಟು.

**ಹರಿಜನ, ೨೨—೧೨—೧೯೩೩.**

# " ಒಂದು ತ್ಯಾಗ "

[ ಮುಗ್ಧ ತಾರುಣ್ಯವೊಂದು ಅಮೌಲ್ಯ ಆಸ್ತಿ. ಸೌಖ್ಯವೆಂದು ವೃಥಾ ಭಾವಿಸುವ ಕ್ಷಣಿಕ ಮನೋವಿಕಾರದ ಸಲುವಾಗಿ ಈ ಆಸ್ತಿಯನ್ನು ಹಾಳುಮಾಡಿಕೊಳ್ಳಬಾರದು. ತಾವು ಮಾಡುವದನ್ನು ತಾವೇ ತಿಳಿಯದ ತಿಳಿಗೇಡಿಗಳಾಗಲಿ ಇಲ್ಲವೆ ಠಕ್ಕರಾಗಲಿ ಆಗಿರುವ ತರುಣರು ತಾವು ಮುಗ್ಧಭಾವದಿಂದ ತರುಣ ಹುಡುಗಿಯರೊಡನೆ ನಡೆದುಕೊಳ್ಳುವೆವೆಂದು ಎಷ್ಟೇ ಆಢ್ಯತೆಯಿಂದ ಹೇಳಿಕೊಂಡರೂ ಇಂಥವರು ಬೀಸುವ ಬಲೆಗೆಯನ್ನು ಪ್ರತಿಭಟಿಸುವ ಸಾಮರ್ಥ್ಯವು ನಮ್ಮ ಅಬಲ ಬಾಲಿಕೆಯರಲ್ಲಿ ಬರಲೇ ಬೇಕು. ]

ನಾನು ಇಂಗ್ಲಂಡದಿಂದ ೧೮೯೧ ರಲ್ಲಿ ಮರಳಿ ಬಂದೊಡನೆ ನಮ್ಮ ಮನೆಯೊಳಗಿನ ಎಲ್ಲ ಚಿಕ್ಕ ಮಕ್ಕಳ ಯೋಗಕ್ಷೇಮವನ್ನು ನಾನೇ ವಹಿಸಿಕೊಂಡೆ. ಅವರೊಡನೆ ಗಾಳಿಯಲ್ಲಿ ಅಡ್ಡಾಡಲಿಕ್ಕೆ ಹೋಗುವ ಕಾರ್ಯಕ್ರಮವೊಂದನ್ನು ನಾನು ಹೊಸದಾಗಿ ಪ್ರಾರಂಭಿಸಿದೆ. ಅವರಲ್ಲಿ ಹುಡುಗರೂ ಹುಡುಗೆಯರೂ ಎಲ್ಲರೂ ಇರುತ್ತಿದ್ದರು. ಅವರ ಹೆಗಲಮೇಲೆ ಕೈ ಹಾಕಿಕೊಂಡು ನಾನು ಹೋಗುತ್ತಿದ್ದೆ. ಇವರೆಲ್ಲರೂ ನನ್ನ ಅಣ್ಣಂದಿರ ಮಕ್ಕಳು. ಅವರು ದೊಡ್ಡವರಾದ ಮೇಲೆಯೂ ನನ್ನ ಈ ನಿತ್ಯದ ಕಾರ್ಯಕ್ರಮವು ಮುಂದುವರಿಯಿತು. ಮನೆತನವು ದೊಡ್ಡದಾದಂತೆ ಜನರ ಲಕ್ಷ್ಯ ಸೆಳೆಯುವಷ್ಟು ನಮ್ಮ ಪರಿವಾರ ದೊಡ್ಡದಾಗುತ್ತಾ ನಡೆಯಿತು.

ಏನಾದರೂ ತಪ್ಪು ಮಾಡುತ್ತಿದ್ದೇನೆಂದು ಎಷ್ಟೋ ವರ್ಷಗಳವರೆಗೂ ನನ್ನ ಕನಸುಮನಸಿನಲ್ಲೂ ಬಂದಿರಲಿಲ್ಲ. ನಾನು ಸಾಬರಮತಿಯಲ್ಲಿ ಆಶ್ರಮ ಸ್ಥಾಪಿಸಿದ ಮೇಲೆಯೂ ಹುಡುಗ-ಹುಡುಗೆಯರ ಹೆಗಲಮೇಲೆ ಕೈಹಾಕಿಕೊಂಡು ಅಡ್ಡಾಡಲು ಹೋಗುವ ನಿತ್ಯದ ಕ್ರಮ ನಡೆದೇ ನಡೆಯಿತು. ಆಗ

ಆಶ್ರಮವಾಸಿಗಳಲ್ಲೊಬ್ಬರು ನನ್ನ ಈ ನಿತ್ಯದ ರೂಢಿ ಬೆಳೆದ ಹುಡುಗೆಯರು ಹಾಗು ಹೆಣ್ಣುಮಕ್ಕಳಿಗೆ ಅನ್ವಯಿಸಿದ್ದಾದರೆ ಅದು ಸಮಾಜದಲ್ಲಿ ಚೆಂದ ಕಾಣುವದಿಲ್ಲವೆಂದು ಸೂಚಿಸಿದರು. ಆಶ್ರಮವಾಸಿಗಳೆಲ್ಲರೊಡನೆ ಚರ್ಚೆಯಾಗಿ ನನ್ನ ನಿತ್ಯದ ಕ್ರಮವು ಮುಂದುವರಿಸಲ್ಪಟ್ಟಿತು. ಇತ್ತೀಚೆ ವರ್ಧಾಕ್ಕೆ ಬಂದ ನನ್ನಿಬ್ಬರು ಸಹೋದ್ಯೋಗಿಗಳು ನಾನೀ ಕ್ರಮವನ್ನು ಬಿಟ್ಟುಕೊಡಬೇಕೆಂದು ಸೂಚಿಸಿದರು. ನನ್ನ ಈ ಆಚರಣೆ ಇತರರಿಗೆ ಕೆಟ್ಟ ಆದರ್ಶವಾದೀತೆಂದು ಅವರು ನನಗೆ ಹೇಳಿದರು. ಅವರ ಹೇಳಿಕೆ ನನಗೆ ಮನವರಿಕೆಯಾಗಲಿಲ್ಲ. ಆದರೂ ಗೆಳೆಯರ ಎಚ್ಚರಿಕೆಯನ್ನು ಕಡೆಗಣಿಸುವ ಇಚ್ಛೆ ನನಗಿರಲಿಲ್ಲ. ಆದ್ದರಿಂದ ಈ ಮಾತನ್ನು ನಾನು ಆಶ್ರಮದ ಐವರು ನಿವಾಸಿಗಳಿಗೆ ಒಪ್ಪಿಸಿ ಈ ಬಗ್ಗೆ ಎಲ್ಲ ರೀತಿಯಿಂದ ಆಲೋಚಿಸಿ ಸಲಹೆ ಕೊಡಬೇಕೆಂದು ಕೇಳಿಕೊಂಡೆ. ಈ ಬಗ್ಗೆ ಕೂಲಂಕಷ ವಿಚಾರಣೆ ನಡೆದಿರಲು ಈ ಮಾತನ್ನು ಬಗೆಹರಿಸುವಂಥ ಮಹತ್ತ್ವದ ಸಂಗತಿಯೊಂದು ಜರುಗಿತು. ಒಳ್ಳೇ ಚುರುಕು ವಿದ್ಯಾರ್ಥಿಯೆಂದು ವಿಶ್ವವಿದ್ಯಾಲಯದಲ್ಲಿ ಹೆಸರುವೆತ್ತ ಕಾಲೇಜದ ತರುಣನೊಬ್ಬನು ತನ್ನ ಪ್ರಭಾವಕ್ಕೆ ಒಳಗಾದ ಹುಡುಗಿಯೊಬ್ಬಳೊಡನೆ ಎಲ್ಲ ಬಗೆಯ ಸಲಿಗೆಯಿಂದ ನಡೆಯುತ್ತ ಸ್ವೈರವೃತ್ತಿ ನಡೆಸ ತೊಡಗಿದ್ದನೆಂಬ ಸುದ್ದಿ ನನಗೆ ಬಂದು. ಆಕೆಯನ್ನು ತಾನು ತನ್ನ ತಂಗಿಯಂತೆಯೇ ಭಾವಿಸಿರುತ್ತಿದ್ದಾಗಿಯೂ ಬಂಧುತ್ವದ ಭಾವನೆಯನ್ನು ಶಾರೀರಕವಾಗಿ ವ್ಯಕ್ತಗೊಳಿಸಲು ತನಗಿದ್ದ ಸ್ವಚ್ಛಂದ ಸ್ವಾತಂತ್ರ್ಯವನ್ನು ಹತ್ತಿಕ್ಕಲು ತಾನು ಅಸಮರ್ಥನಾಗಿರುವುದಾಗಿಯೂ ಅವನು ವಾದಿಸುತ್ತಿದ್ದನು. ಪಾಪಭಾವನೆಯನ್ನು ಯಾರಾದರೂ ತನಗೆ ಆರೋಪಿಸಿದಾಗೆಲ್ಲ ಸಿಡಿಮಿಡಿಗೊಂಡು ಪ್ರತಿಭಟಿಸುತ್ತಿದ್ದನು. ಆತನು ನಡಿಸಿದ ಕೃತಿಗಳನ್ನು ನಾನು ಇಲ್ಲಿ ಉಲ್ಲೇಖಿಸಿದ್ದಾದರೆ ಅವನ ಸ್ವಚ್ಛಂದವೃತ್ತಿಯು ಪಾಪಭಾವನೆಯಿಂದ ಕೂಡಿದ್ದೆಂದು ಯಾವ ವಾಚಕನೂ ಸಂದೇಹವಿಲ್ಲದೆ ಹೇಳಬಹುದು. ಈ ವಿಷಯಕವಾದ ಪತ್ರವ್ಯವಹಾರವನ್ನೆಲ್ಲ ನಾನು ಓದಿ ಕೆಲವು ಗೆಳೆಯರಿಗೆ ಅದನ್ನು ತೋರಿಸಿದೆನು. ಅದನ್ನೋದಿದ ನಾವೆಲ್ಲರೂ ಹೀಗೆ ನಿರ್ಣಯಿಸಿದೆವು: ಆ ತರುಣನು ಶುದ್ಧ ಠಕ್ಕನಾದರೂ ಇರಬೇಕು ಇಲ್ಲವೆ ಆತ್ಮವಂಚಕನಾದರೂ ಇರಬೇಕು.

ಅದೇನೇ ಇರಲಿ, ಈ ಮಾತಿನ ಬೋಧದಿಂದ ನನ್ನ ಬುದ್ಧಿ ಜಾಗ್ರತವಾಗಿ

ನುತ್ತೆ ಆಲೋಚಿಸತೊಡಗಿತು. ನನ್ನ ಸಹೋದ್ಯೋಗಿಗಳ ಎಚ್ಚರಿಕೆಯನ್ನು ನಾನು ಮತ್ತೆ ಸ್ಮರಿಸಿಕೊಂಡೆ. ನನ್ನ ನಿತ್ಯದ ರೂಢಿಯನ್ನು ಈ ತರುಣನು ತನ್ನ ರಕ್ಷಣಕ್ಕಾಗಿ ಉಪಯೋಗಿಸಿಕೊಂಡ ಪಕ್ಷದಲ್ಲಿ ನನಗೇನನಿಸಬಹು ದೆಂಬುದಾಗಿ ನನ್ನನ್ನೇ ನಾನು ಕೇಳಿಕೊಂಡೆ. ಈ ಸಂದರ್ಭದಲ್ಲಿ ಆ ತರುಣನ ಚಿತ್ತಲಹರಿಗಳಿಗೆ ಆಹುತಿಯಾದ ಆ ಹುಡುಗಿಯ ಬಗ್ಗೆಯೂ ಒಂದು ಮಾತನ್ನು ಹೇಳಲೇಬೇಕಾಗಿದೆ. ಆ ತರುಣನನ್ನು ಆಕೆ ಪವಿತ್ರಭಾವನೆಯ ಬಂಧುವೆಂದೇ ತಿಳಿದುಕೊಂಡಿರುವಳಾದರೂ ಅವನು ನಡಿಸುತ್ತಿರುವ ಸಲಿ ಗೆಯ ಚೇಷ್ಟೆಗಳು ಅವಳ ಮನಸ್ಸಿಗೆ ಬರದೆ ಆ ಬಗ್ಗೆ ಆಕೆ ಆಗೀಗ ವಿರೋಧಿ ಸಿದ್ದೂ ಉಂಟು. ಆದರೆ ಅವನ ಕೃತಿಗಳನ್ನು ತಡೆಗಟ್ಟುವಷ್ಟು ಸಾಮರ್ಥ್ಯವು ಅವಳಲ್ಲಿಲ್ಲ. ಈ ಸಂಗತಿಯು ನನ್ನನ್ನು ಅಂತರ್ಮುಖಿಯನ್ನಾಗಿ ಮಾಡಿತು. ಆ ಪತ್ರವ್ಯವಹಾರವನ್ನು ಓದಿದ ೨-೩ ದಿನಗಳಲ್ಲಿಯೇ ನನ್ನ ಈವರೆಗಿನ ಅಭ್ಯಾಸವನ್ನು ನಾನು ತ್ಯಾಗಮಾಡಲೇಬೇಕೆಂಬ ನಿರ್ಣಯಕ್ಕೆ ನಾನು ಬಂದೆ. ನನ್ನೀ ನಿರ್ಣಯವನ್ನು ವರ್ಧಾ ಆಶ್ರಮದ ನಿವಾಸಿಗಳಿಗೆ ಇದೇ ೧೨ ನೆಯ ದಿನಾಂಕಕ್ಕೆ ನಾನು ಸಾರಿದೆ (೧೨-೯-೧೯೩೫ಕ್ಕೆ). ಈ ನಿಶ್ಚಯ ಮಾಡುವ ಕಾಲಕ್ಕೆ ನನಗೆ ವ್ಯಥೆಯಾಯಿತು. ಹೆಣ್ಣುಮಕ್ಕಳ ಹೆಗಲಮೇಲೆ ಕೈಹಾಕು ತ್ತಿದ್ದ ಅವಧಿಯಲ್ಲಿ ಆ ಅಭ್ಯಾಸದ ಮೂಲಕ ನನ್ನಲ್ಲಿ ಎಂದೂ ಅಪವಿತ್ರ-ಭಾವನೆ ಉದಯಿಸಿಲ್ಲ. ನನ್ನ ಕೃತಿ ಎಲ್ಲರಿಗೂ ಕಾಣುವಂತೆಯೇ ನಡೆದಿತ್ತು. ಈ ನನ್ನ ಕೃತಿ ತಂದೆಯ ವಾತ್ಸಲ್ಯದಿಂದ ಪ್ರೇರಿತವಾಗಿತ್ತೆಂದು ನನಗೆ ನಂಬಿಗೆಯಿದೆ. ಇದರಿಂದಲೇ ಅನೇಕಾನೇಕ ಹುಡುಗಿಯರು ನನ್ನ ನೇತೃತ್ವ ಮತ್ತು ಪಾಲಕತ್ವದಲ್ಲಿ ತಮ್ಮ ಗುಟ್ಟಿನ ಮಾತುಗಳನ್ನು ನನಗೆ ಹೇಳಿದ್ದುಂಟು. ನನ್ನಂತೆ ಅವರ ವಿಶ್ವಾಸಕ್ಕೆ ಅರ್ಹರಾದವರು ಬಹುಶಃ ಬೇರೊಬ್ಬರು ಯಾರೂ ಇರಲಿಕ್ಕಿಲ್ಲ. ಬ್ರಹ್ಮಚರ್ಯೆಯೆಂದರೆ ಸ್ತ್ರೀ ಪುರುಷರು ಪರಸ್ಪರರ ಮೈಯನ್ನು ಯಾವ ಕಾಲಕ್ಕೂ ಮುಟ್ಟದಂತೆ ಒಂದು ಗೋಡೆ ಅಡ್ಡಗಟ್ಟಿರಲೇ ಬೇಕೆಂದು ನಾನು ಭಾವಿಸುವವನಲ್ಲ. ಅತಿ ಸಣ್ಣ ಪ್ರಲೋಭನದಿಂದಲೂ ಬ್ರಹ್ಮಚರ್ಯೆ ಹಾಳಾಗುವದೆಂದು ನಾನು ತಿಳಿದುಕೊಂಡಿಲ್ಲ. ಹೀಗಿದ್ದಾಗ್ಯೂ ನಾನು ಇದುವರೆಗೆ ವಹಿಸಿದ ಸ್ವಾತಂತ್ರ್ಯದಿಂದ ಉದ್ಭವಿಸಬಹುದಾದ ಅಪಾಯಗಳನ್ನು ನಾನು ತಿಳಿಯದೆ ಇಲ್ಲ.

ಹೀಗಾಗಿ, ಇಷ್ಟು ದಿವಸದ ನನ್ನ ಈ ನಿತ್ಯಕ್ರಮ ಎಷ್ಟೋ ಪವಿತ್ರ ಭಾವನೆಯಿಂದ ಕೂಡಿದುದಾಗಿದ್ದರೂ ನನ್ನ ಆ ಅಭ್ಯಾಸವನ್ನು ನಾನು ತ್ಯಾಗ ಮಾಡಬೇಕಾಗಿ ನನಗೆ ತೋರಿಬಂತು. ಅವಿಶ್ರಾಂತ ದಕ್ಷತೆಯಿಂದ ನನ್ನ ಜೀವನದಲ್ಲಿ ನಾನು ಸತ್ಯದೊಡನೆ ಪ್ರಯೋಗ ನಡೆಸಿದುದರಿಂದ ನನ್ನ ಪ್ರತಿಯೊಂದು ಕೃತಿಯನ್ನೂ ಸಹಸ್ರಾರು ಸ್ತ್ರೀ-ಪುರುಷರು ಒರೆಹಚ್ಚಿ ನೋಡುವದುಂಟು. ತರ್ಕರ ರಕ್ಷಣೆ ಅವಶ್ಯವಾಗಬಹುದಾದ ಕೃತಿಗಳನ್ನು ನಾನು ತ್ಯಜಿಸಲೇಬೇಕು. ನನ್ನ ಆ ಅಭ್ಯಾಸವನ್ನು ಎಲ್ಲರೂ ಅವಶ್ಯವಾಗಿ ಪಾಲಿಸಲೇಬೇಕೆಂಬ ಉದ್ದೇಶವೂ ಅದರಲ್ಲಿರಲಿಲ್ಲ. ಆ ತರುಣನ ಪ್ರಕರಣವು ನನಗೆ ಎಚ್ಚರಿಕೆ ಕೊಟ್ಟಿದೆ. ನನ್ನ ಉದಾಹರಣೆಯಿಂದಲೇ ಆಗಲಿ ಅಥವಾ ಅದಿಲ್ಲದೆಯಾಗಲಿ ಯಾರಾದರೂ ತಪ್ಪು ಮಾರ್ಗವನ್ನು ಹಿಡಿದಿದ್ದರೆ ಅವರು ಸರಿಪಡಿಸಿಕೊಂಡಾರೆಂಬ ಭರವಸೆಯಿಂದ ನಾನು ಈ ಎಚ್ಚರಿಕೆಯನ್ನು ಅವರಿಗಾಗಿ ವಹಿಸಿ ನನ್ನ ಆ ನಿತ್ಯರೂಢಿಯ ತ್ಯಾಗಮಾಡಿದ್ದೇನೆ. ಮುಗ್ಧ ತಾರುಣ್ಯವೊಂದು ಅಮೌಲ್ಯ ಆಸ್ತಿ. ಸೌಖ್ಯವೆಂದು ವೃಥಾ ಭಾವಿಸುವ ಕ್ಷಣಿಕ ಮನೋವಿಕಾರದ ಸಲುವಾಗಿ ಈ ಆಸ್ತಿಯನ್ನು ಹಾಳುಮಾಡಿಕೊಳ್ಳಬಾರದು. ತಾವು ಮಾಡುವದನ್ನು ತಾವೇ ತಿಳಿಯದ ತಿಳಿಗೇಡಿಗಳಾಗಲಿ ಇಲ್ಲವೆ ಠಕ್ಕರಾಗಲಿ ಆಗಿರುವ ತರುಣರು ತಾವು ಮುಗ್ಧಭಾವದಿಂದ ತರುಣ ಹುಡುಗಿಯರೊಡನೆ ನಡೆದುಕೊಳ್ಳುವೆವೆಂದು ಎಷ್ಟೇ ಆಢ್ಯತೆಯಿಂದ ಹೇಳಿಕೊಂಡರೂ ಇಂಥವರು ಬೆಳಸುವ ಸಲಿಗೆಯನ್ನು ಪ್ರತಿಭಟಿಸುವ ಸಾಮರ್ಥ್ಯವು ನಮ್ಮ ಅಬಲ ಬಾಲಿಕೆಯರಲ್ಲಿ ಬರಲೇಬೇಕು.

**ಹರಿಜನ ೨೧—೯—೧೯೩೫.**

# " ಸಿಂಹಳದ ಸ್ತ್ರೀಯರನ್ನು ಕುರಿತು "

[ ಈ ಜಗದ್ರಂಗದಲ್ಲಿ ನಿಮ್ಮ ಭಾಗದ ಪಾತ್ರವನ್ನು ನೀವು ನಿರ್ವಹಿಸುವುದಾದರೆ ಪುರುಷರನ್ನು ಮೆಚ್ಚಿಸುವದಕ್ಕೆಂದು ನಿಮ್ಮನ್ನು ಶಿಂಗರಿಸಿಕೊಳ್ಳಲು ನೀವು ಒಪ್ಪಕೂಡದು. ನಾನು ಹೆಣ್ಣಾಗಿ ಜನಿಸಿದ್ದರೆ, ಹೆಂಗುಸೆಂದರೆ ಗಂಡಸಿನ ಕೈಗೊಂಬೆಯೆಂಬುದಾಗಿ ತಿಳಿಯುವ ಪುರುಷನ ಎಲ್ಲ ಕೃತಿಯ ವಿರುದ್ಧ ಬಂಡು ಹೂಡುತ್ತಿದ್ದೆ. ]

ಕೊಲಂಬೋದಲ್ಲಿ ನೆರೆದ ಒನಪಿನ ಸಿಂಹಾಲೀ ಚೆಲುವೆಯರ ಒಂದು ಸಭೆಯಲ್ಲಿ ಗಾಂಧಿಜಿ ಭಾರತದಲ್ಲಿ ಹಸಿವೆಯಿಂದ ಬಳಲುವ ದರಿದ್ರಕೋಟಿಯ ದಾರುಣಚಿತ್ರವನ್ನು ವರ್ಣಿಸುತ್ತ ಹೀಗೆ ಹೇಳಿದರು :—

" ಪೂರ್ವಕಾಲದಲ್ಲಿ ಮಹೇಂದ್ರನು ಭಾರತದಿಂದ ಸಿಂಹಳಕ್ಕೆ ಬಂದಾಗ ಮಾತೃಭೂಮಿಯ ಮಕ್ಕಳು ಧರ್ಮದ ಇಲ್ಲವೆ ಅರ್ಥದ ದರಿದ್ರತೆಯಲ್ಲಿ ಇರಲಿಲ್ಲ ನಮ್ಮ ಭಾಗ್ಯಚಕ್ರ ಏರಿಕೆಯಲ್ಲಿದ್ದು ಆ ಭಾಗ್ಯದಲ್ಲಿ ನೀವೂ ಭಾಗ ವಹಿಸಿದಿರಿ. ಅಲ್ಲಿಯ ಮಕ್ಕಳು ಈಗ ಹಸಿವೆಯಿಂದ ಕಂಗಾಲಾಗಿದ್ದಾರೆ. ಆ ದರಿದ್ರನಾರಾಯಣನ ಪ್ರತಿನಿಧಿಯಾಗಿ ನಿಮ್ಮೆದುರು ಭಿಕ್ಷೆಬೇಡಲು ಬಂದಿದ್ದೇನೆ. ಅವರೊಡನೆ ಇದ್ದ ನಿಮ್ಮ ನಿರಂತರ ಸಂಬಂಧವನ್ನು ನೀವು ಅಲ್ಲಗಳೆಯುವದಿಲ್ಲವಾದರೆ ಹಾಗು ಆ ಬಾಂಧವ್ಯದಲ್ಲಿ ನಿಮಗೆ ಅಭಿಮಾನ ವೆನಿಸುವುದಾದರೆ ನಿಮ್ಮ ಧನವನ್ನು ಮುತ್ತು-ರತ್ನ-ವಜ್ರಗಳನ್ನು ಅವರಿಗಾಗಿ ದಾನಕೊಡಿರಿ. ಬೇರೆ ಸ್ಥಳಗಳಲ್ಲಿ ಭಗಿನಿಯರು ಹೀಗೆ ಮಾಡಿದ್ದಾರೆ. ನೀವೂ ಹಾಗೆ ಮಾಡುವಿರಾ ? ನನ್ನ ದೇಶಭಗಿನಿಯರು ಮೈ ಹೊರಲಾರದಷ್ಟು ಆಭರಣಗಳನ್ನು ಮೈತುಂಬಾ ಹಾಕಿಕೊಂಡಾಗ ನನ್ನ ಹದ್ದಿನ ಕಣ್ಣುಗಳು ಹಸಿವೆಯಿಂದ ಆ ಆಭರಣಗಳ ಮೇಲೆ ಎರಗುತ್ತವೆ. ಹೀಗೆ ನಾನು ಕೇಳುವುದರಲ್ಲಿ ನಾನು ನಿರಿಯಿಟ್ಟ ಒಂದು ಗುರಿ ಉಂಟು. ಆಭರಣಗಳ ಮೇಲಿನ ನಿಮ್ಮೀ ಆಸೆಬುರುಕತನವನ್ನು ಹೋಗಲಾಡಿಸುವದೇ ನನ್ನ ಉದ್ದೇಶವಾಗಿದೆ. ಇತರ ಸ್ತ್ರೀಯರೊಡನೆ ಸ್ವಾತಂತ್ರ್ಯ ವಹಿಸಿ ಪ್ರಶ್ನೆ ಕೇಳುವಂತೆ ನಿಮಗೂ ನಾನು ಒಂದು ಪ್ರಶ್ನೆ ಕೇಳಲೇ ? ಪುರುಷರಿಗಿಂತ ಸ್ತ್ರೀಯರು ಹೆಚ್ಚು ಆಭರಣಗಳನ್ನು ಏಕೆ ಇಟ್ಟುಕೊಳ್ಳುವರು ? ಹಾಗೆ ಇಟ್ಟುಕೊಳ್ಳುವ ಮನಃ

ಪ್ರವೃತ್ತಿಯಾದರೂ ಏಕೆ ಆಗುವದು ? ಪುರುಷನನ್ನು ಮೆಚ್ಚಿಸುವದಕ್ಕೆ ಸ್ತ್ರೀಯು ಹೀಗೆ ಮಾಡುವದುಂಟೆಂದು ನನ್ನ ಕೆಲವು ಗೆಳತಿಯರು ನನಗೆ ಹೇಳಿದ್ದಾರೆ. ಹಾಗೆಯೇ ನೀವೂ ಕೇಳುವಿರಾದರೆ ನಿಮಗೊಂದು ಮಾತು ಹೇಳುತ್ತೇನೆ. ಈ ಜಗದ್‌ರಂಗದಲ್ಲಿ ನಿಮ್ಮ ಪಾತ್ರವನ್ನು ನೀವು ನಿರ್ವಹಿಸುವುದಾದರೆ ಪುರುಷರನ್ನು ಮೆಚ್ಚಿಸುವುದಕ್ಕೆಂದು ನಿಮ್ಮನ್ನು ಸಿಂಗರಿಸಿಕೊಳ್ಳಲು ನೀವು ಒಪ್ಪಕೂಡದು. ನಾನು ಹೆಣ್ಣಾಗಿ ಜನಿಸಿದ್ದರೆ, ಹೆಂಗಸೆಂದರೆ ಗಂಡಸಿನ ಕೈಗೊಂಬೆಯೆಂಬುದಾಗಿ ತಿಳಿಯುವ ಪುರುಷನ ಎಲ್ಲ ಕೃತಿಯ ವಿರುದ್ಧ ನಾನು ಬಂಡುಹೂಡುತ್ತಿದ್ದೆ. ಹೆಣ್ಣುಮಕ್ಕಳ ಹೃದಯದಲ್ಲಿ ಹೊಗಬೇಕೆಂದು ನಾನು ಮನಸ್ಸಿನಿಂದ ಹೆಣ್ಣಾಗಿದ್ದೇನೆ. ನನ್ನ ಹೆಂಡತಿಯೊಡನೆ ಗಂಡನೆಂಬ ದೃಷ್ಟಿಯಿಂದ ನಡೆದುಕೊಳ್ಳುವ ನನ್ನ ವೃತ್ತಿಯನ್ನು ನಾನು ಬದಲಿಸುವವರೆಗೂ ಅವಳ ಹೃದಯದಲ್ಲಿ ನನಗೆ ಪ್ರವೇಶವೇ ದೊರೆತಿರಲಿಲ್ಲ. ಆದ್ದರಿಂದ ಗಂಡನಿಗಿದ್ದ ಆ ವಿಶೇಷಾಧಿಕಾರಗಳನ್ನು ಬಿಟ್ಟುಕೊಟ್ಟು ಅವಳ ಅಧಿಕಾರಗಳನ್ನೆಲ್ಲಾ ನಾನು ಅವಳಿಗೆ ಒಪ್ಪಿಸಿದೆ. ಇಂದು ನನ್ನಂತೆಯೇ ಸರಳ ಸಾದಾ ಜೀವನವನ್ನು ಆಕೆ ನಡೆಸುತ್ತಿರುವದನ್ನು ನೀವು ನೋಡುವಿರಿ. ಆಕೆಯ ಮೈಮೇಲೆ ಕೊರಳಹಾರವಾಗಲಿ ಮುತ್ತುರತ್ನಗಳಾಗಲಿ ಇಂದು ಇಲ್ಲವೇ ಇಲ್ಲ. ಆಕೆಯಂತೆ ನೀವೂ ಆಗಬೇಕೆಂದು ನನ್ನಿಚ್ಛೆಯಿದೆ. ನಿಮ್ಮ ಚಿತ್ತ ಲಹರಿಗಳ ದಾಸಿಯರು ನೀವಾಗಬಾರದು. ಮನಸುಖರಾಯನಂತಿದ್ದ ಪುರುಷನ ದಾಸಿಯರೂ ನೀವಾಗಬಾರದು ನಿಮ್ಮ ದೇಹಗಳನ್ನು ಸಿಂಗರಿಸಿಕೊಳ್ಳುವದಿಲ್ಲವೆಂದು ಸ್ಪಷ್ಟವಾಗಿ ಹೇಳಿರಿ. ಸುವಾಸಿಕ ಅತ್ತರುಗಳನ್ನಾಗಲಿ ಲ್ಯಾವೆಂಡರ್ ವಾಟರನ್ನಾಗಲಿ ಬಯಸಬೇಡಿರಿ. ಯೋಗ್ಯ ಪರಿಮಳವನ್ನು ನೀವು ಬೀರುವುದಾದರೆ ಆ ಪರಿಮಳವು ನಿಮ್ಮ ಹೃದಯಕಮಲದೊಳಗಿಂದಲೇ ಬರಬೇಕು. ಹೀಗಾದ ಪಕ್ಷದಲ್ಲಿ ಪುರುಷರನ್ನಷ್ಟೇ ಏಕೆ ಇಡೀ ಮಾನವಕುಟುಂಬವನ್ನೇ ನೀವು ಮಂತ್ರಮುಗ್ಧವಾಗಿ ಮಾಡಿಬಿಡುವಿರಿ. ಅದು ನಿಮ್ಮ ಜನ್ಮಸಿದ್ಧ ಹಕ್ಕು. ಸ್ತ್ರೀಯ ಹೊಟ್ಟೆಯಿಂದಲೇ ಪುರುಷನು ಹುಟ್ಟಿಬಂದು ಅವಳ ರಕ್ತಮಾಂಸಗಳಿಂದಲೇ ಇವನ ರಕ್ತಮಾಂಸಗಳು ರೂಪಗೊಳ್ಳುವದುಂಟು. ನೀವು ನೀವೇ ಆಗಿ ನಿಮ್ಮ ಸಂದೇಶ ಜಗಕ್ಕೆ ಬೀರಿರಿ. ”

ಈ ಸಂದರ್ಭದಲ್ಲಿ ಗಾಂಧಿಜಿ ಸೀತೆಯ ಉದಾಹರಣೆ ಕೊಟ್ಟಿದ್ದಲ್ಲದೆ ದಕ್ಷಿಣ ಆಫ್ರಿಕೆಯಲ್ಲಿ ಕಳ್ಳರು–ಕಾಕರು, ಉಗ್ರ ಪಠಾಣರು ಮೊದಲುಗೊಂಡು ಸಹಸ್ರಾರು ಜನರ ಮೆಚ್ಚಿಕೆಗೆ ಪಾತ್ರಳಾದ ಧೀರಳೂ ಪವಿತ್ರಳೂ ಆದ ಕುಮಾರಿ ಸ್ಲೆಶಿನ್ನಳ ಉದಾಹರಣೆಯನ್ನೂ ಕೊಟ್ಟರು. ನಿಜವಾದ ಗೌರವವು ಎಲ್ಲಿರುವದೆಂಬ ಬಗ್ಗೆ ಮುಂದುವರಿಯುತ್ತ ಅವರು ಹೀಗೆ ಹೇಳಿದರು:

" ಚಹ-ಕಾಫೀ ತೋಟಗಳಲ್ಲಿ ಕೆಲಸಮಾಡುವ ನಿಮ್ಮ ದೀನ ಭಗಿನಿಯರ ದಾರುಣ ವೃತ್ತಾಂತವು ನಿಮಗೆ ಗೊತ್ತಿದೆಯೇ? ಅವರನ್ನು ನಿಮ್ಮ ಒಡಹುಟ್ಟಿದ ಅಕ್ಕತಂಗಿಯರೆಂದು ನೀವು ತಿಳಿದುಕೊಳ್ಳಬೇಕು. ಆರೋಗ್ಯ ಸ್ವಚ್ಛತೆಗಳ ಬಗ್ಗೆ ನಿಮಗಿದ್ದ ಹೆಚ್ಚಿನ ಜ್ಞಾನವನ್ನೂ, ಇತರ ನಿಮ್ಮ ಬುದ್ಧಿ ಶಕ್ತಿಗಳನ್ನೂ ಅವರಿಗೆ ನೀಡಿ ಅವರ ಸೇವೆ ನೀವು ಮಾಡಬೇಕು. ಅವರ ಸೇವೆ ನಿಮ್ಮ ಗೌರವ. ಸೇವೆಯ ಪ್ರಸಂಗಗಳು ಮನೆಯ ಬಾಗಿಲಲ್ಲಿಯೇ ಇಲ್ಲವೇ? ದುಷ್ಟರೂ ಕುಡುಕರೂ ಆದ ಅನೇಕರು ಸಮಾಜಕ್ಕೆ ಅಪಾಯಕಾರಕರಾಗಿಲ್ಲವೇ? ಉದ್ಧಾರದ ಸೈನ್ಯ ಕನ್ಯೆಯರ (Salvation Army Girls) ರಂತೆ ನೀವಾದರೂ ದಿಟ್ಟತನದಿಂದ ಇಂಥ ಜನರ ಮಧ್ಯದಲ್ಲಿ ಹೋಗಿ ಅವರ ದುಷ್ಟತನವನ್ನು ಹೋಗಲಾಡಿಸಬೇಕು. ಸೈನ್ಯದ ಆ ಕನ್ಯೆಯರು ಕಳ್ಳರು, ಜೂಜುಗಾರರು, ಕುಡುಕರೇ ಮೊದಲಾದವರ ಗುಂಪಿನಲ್ಲಿ ಮುನ್ನುಗ್ಗಿ ಅವರ ಕೊರಳಿಗೆ ಜೋತುಬಿದ್ದು ಕಾಲಮೇಲೆ ಬಿದ್ದು ನಮಸ್ಕರಿಸಿ ಆ ಜನರನ್ನು ಎಚ್ಚರಿಸುತ್ತಾರೆ. ಹೀಗೆ ದೀನರಾದವರ ಸೇವೆ ಮಾಡುವದೇ ನಿಮಗೆ ದೊಡ್ಡ ಭೂಷಣವಾಗಿ ಪರಿಣಮಿಸುವದು. ಈಗ ನೀವು ಧರಿಸಿರುವ ಚೆಲುವಾದ ವಸ್ತ್ರ ಒಡವೆಗಳಿಗಿಂತಲೂ ಆ ನಿಮ್ಮ ತ್ಯಾಗದ ಆಭರಣವು ನಿಮಗೆ ಚೆನ್ನಾಗಿ ಒಪ್ಪುವದು. ನಿಮ್ಮೀ ಆಭರಣಗಳನ್ನೆಲ್ಲ ನನಗೆ ಒಪ್ಪಿಸಿರಿ. ನಾನು ನಿಮ್ಮ ವಿಶ್ವಾಸದ ಪಂಚನಾಗಿ ನಿಮ್ಮಲ್ಲಿ ಸಿಲುಕು ಉಳಿಯುವ ಎಲ್ಲ ಧನದ ಧರ್ಮದರ್ಶಿಯಾಗಿ ಅದನ್ನು ಬಡವರಿಗಾಗಿ ವೆಚ್ಚಮಾಡುವೆ.

ನನ್ನೀ ಜಂಗಮ ಸಂದೇಶವು ನಿಮ್ಮ ಹೃದಯಗಳಲ್ಲಿ ಸ್ಥಾವರವಾಗಿ ನೆಲೆಗೊಳ್ಳಲೆಂದು ಪ್ರಾರ್ಥಿಸುತ್ತೇನೆ.

" **ಸಿಂಹಲದಲ್ಲಿ ಗಾಂಧಿಜಿ** " (Gandhi in Ceylon)
ಎಂಬ ಗ್ರಂಥದಿಂದ

# " ಬ್ರಹ್ಮೀ ಸ್ತ್ರೀಯರನ್ನು ಕುರಿತು "

[" ಬ್ರಹ್ಮದೇಶದ ಸುಂದರ ಸ್ತ್ರೀಯರು ಚಿರೂಟು ಸಿಗರೇಟುಗಳಿಂದ ತಮ್ಮ ಮುಖಗಳನ್ನು ಅಂದಗೇಡಿ ಮಾಡುತ್ತಿರುವದನ್ನು ಕಂಡು ಹಿಂದುಸ್ಥಾನದಿಂದ ಇಲ್ಲಿಗೆ ಬಂದ ನಮ್ಮಂಥವರಿಗೆ ಖೇದಾಶ್ಚರ್ಯವಾಗುತ್ತದೆ. ಇಡೀ ಭೂಮಂಡಲವನ್ನೇ ವ್ಯಾಪಿಸಿದ ಇಂಥ ಕೆಡುಕಿನ ಬಗ್ಗೆ ಮಾತಾಡುವದೂ ಒಂದು ಮಹಾಪ್ರಯಾಸದ ಕೆಲಸವೇ ಎಂಬುದನ್ನು ನಾನು ಬಲ್ಲೆ."]

ಬ್ರಹ್ಮದೇಶದಲ್ಲಿ ಮೌಲ್ಮೇನ್ ನಗರದ ಒಂದು ಸಭೆಯಲ್ಲಿ ಬ್ರಹ್ಮೀ ಬಾಂಧವರನ್ನುದ್ದೇಶಿಸಿ ಮಾಡಿದ ಭಾಷಣದಲ್ಲಿ ಗಾಂಧಿಜಿ ಸ್ವಸಂತೃಪ್ತಿ ಹಾಗು ಸೌಖ್ಯಗಳು ಬೇಕಾದರೆ ರಾಟಿಯನ್ನು ಕೈಯಲ್ಲಿ ತೆಗೆದುಕೊಳ್ಳಿರೆಂದು ಹೇಳಿದರು. ಬ್ರಹ್ಮೀ ಭಗಿನಿಯರನ್ನುದ್ದೇಶಿಸಿ ಅವರು ಇಂತು ಮುಂದು ವರಿಸಿದರು :—

"ಸದ್ಯದ ಕಾಲದಲ್ಲಿ ಈ ಭೂಮಿಯ ಮೇಲಿದ್ದ ಇನ್ನಿತರ ಯಾವ ದೇಶಗ ಸ್ತ್ರೀಯರೂ ನಿಮ್ಮಷ್ಟು ಸ್ವಾತಂತ್ರ್ಯವನ್ನು ಅನುಭೋಗಿಸುತ್ತಿಲ್ಲ. ನಿಮ್ಮ ಉದ್ಯಮಶೀಲತೆಯೂ ಕೌಶಲ್ಯವೂ ನಿಮಗೆ ಕೀರ್ತಿ ತಂದಿವೆ. ಘನ ವಾದ ಸಂಘಟನಾಶಕ್ತಿ ನಿಮ್ಮಲ್ಲುಂಟು. ಪರದೇಶದ ನಯನಾಜೋಕು ಸರಕುಗಳಿಗೆ ಮರುಳಾದ ನೀವು ನಿಮ್ಮ ಅಭಿರುಚಿಯನ್ನು ಬದಲಿಸಿದ್ದಾದರೆ ಹಾಗು ಸರಳ ಜೀವನದ ಈ ನನ್ನ ಸಂದೇಶವು ನಿಮ್ಮ ಅಂತಃಕರಣದಲ್ಲಿ ಪ್ರತಿಬಿಂಬಿಸಿದ್ದಾದರೆ ನಿಮ್ಮ ಜೀವನದಲ್ಲಿಯೇ ಒಂದು ದೊಡ್ಡ ಕ್ರಾಂತಿ ಯಾದೀತೆಂಬುದರಲ್ಲಿ ಸಂಶಯವಿಲ್ಲ.

* * * *

ಸೇದುವ ಈ ಭಯಂಕರ ದುಷ್ಟಚಟದ ಬಗ್ಗೆ ಮಾತನಾಡಲು ನನಗೆ ಧೈರ್ಯವೇ ಇಲ್ಲದಾಗಿದೆ. ಆದರೆ ಈ ಕೆಟ್ಟ ಚಟವಿಲ್ಲದ ಒಬ್ಬ ಗಂಡಸಾಗಲಿ ಹೆಂಗಸಾಗಲಿ ಬ್ರಹ್ಮದೇಶದಲ್ಲಿ ಎಲ್ಲೂ ಸಿಕ್ಕಲಿಕ್ಕಿಲ್ಲವೆಂದು ನಾನು ಕೇಳಿದ್ದೇನೆ. ಬ್ರಹ್ಮದೇಶದ ಸುಂದರ ಸ್ತ್ರೀಯರು ಚಿರೂಟು ಸಿಗರೇಟುಗಳಿಂದ ತಮ್ಮ ಮುಖಗಳನ್ನು ಅಂದಗೇಡಿ ಮಾಡುತ್ತಿರುವದನ್ನು ಕಂಡು ಹಿಂದುಸ್ಥಾನದಿಂದ

ಇಲ್ಲಿಗೆ ಬಂದ ನಮ್ಮಂಥವರಿಗೆ ಸಖೇದಾಶ್ಚರ್ಯವಾಗುತ್ತದೆ. ಇಡೀ ಭೂಮಂಡಲವನ್ನೇ ವ್ಯಾಪಿಸಿದ ಇಂಥ ಕೆಡುಕಿನ ಬಗ್ಗೆ ಮಾತಾಡುವದೂ ಒಂದು ಮಹಾಪ್ರಯಾಸದ ಕೆಲಸವೇ ಎಂಬುದನ್ನು ನಾನು ಬಲ್ಲೆ. ಟಾಲ್‌ಸ್ಟಾಯರ ಹೆಸರನ್ನು ತಾವು ಕೇಳಿದ್ದರೆ ಅವರ ಮಾತನ್ನು ತಮಗೆ ಪ್ರಮಾಣವೆಂದು ಇಲ್ಲಿ ಹೇಳುತ್ತೇನೆ. ಅವರೂ ಮೊದಲು ನಿಮ್ಮಂತೆಯೇ ಸೇದುಗುಳಿಯಾಗಿದ್ದರು. ಈ ತಂಬಾಕಿನಿಂದ ಇತರ ಇಂದ್ರಿಯಗಳಿಗೇನೇ ಆಗಲಿ ಬುದ್ಧಿಯಂತೂ ಮಂದವಾಗುವದೆಂದು ಅವರು ತಮ್ಮ ಸ್ವಂತ ಅನುಭವದಿಂದ ಹೇಳಿದ್ದಾರೆ. ಗುರುತರ ತಪ್ಪುಗಳೆಲ್ಲಾ ತುಂಬಾಕುಸೇವನೆಯ ಗುಂಗಿನಲ್ಲಿಯೇ ಮಾಡಲ್ಪಟ್ಟಿವೆಯೆಂಬುದಕ್ಕೆ ಅವರು ಅನೇಕ ಉದಾಹರಣೆಗಳನ್ನು ಕೊಟ್ಟಿದ್ದಾರೆ. ಅವರು ಬರೆದ ಒಂದು ಸುಂದರವಾದ ಕಥೆಯಲ್ಲಿ, ಆ ಕಥೆಯ ಪ್ರತಿನಾಯಕನಾದ ಅಧಮನೊಬ್ಬನು ತನ್ನ ಎದುರಾಳಿಯನ್ನು ಕೊಲೆ ಮಾಡುವಾಗ ಕುಡಿದು ಬಂದಿರುವದಿಲ್ಲ; ಆದರೆ ತಂಬಾಕು ಸೇದಿ ಸೇದಿ ಗುಂಗಿನಲ್ಲಿ ಬಂದಿರುತ್ತಾನೆಂಬುದಾಗಿ ಅವರು ಚಿತ್ರಿಸಿದ್ದಾರೆ. ಸೇದುವ ಈ ವ್ಯಸನವು ದಿನೇದಿನೇ ಹೆಚ್ಚುತ್ತಾ ಇದ್ದು ಜಗತ್ತಿನೊಳಗಿನ ಪ್ರತಿಭಾವಂತರನೇಕರು ಇದರ ಬೆಂಬಲಿಗರಾಗಿದ್ದರೂ ಇದರ ವಿರುದ್ಧವಾಗಿಯೂ ಪ್ರಚಂಡ ಪ್ರತಿಭಟನೆ ಉಂಟೆಂಬುದನ್ನು ತಾವು ತಿಳಿಯಲೇಬೇಕು. ಈ ದುರ್ವ್ಯಸನವನ್ನು ಪ್ರತಿಭಟಿಸುವ ಜನರಲ್ಲಿ ಪಶ್ಚಿಮದ ಶ್ರೇಷ್ಠ ಸಜ್ಜನರನೇಕರು ನೀತಿಶಾಸ್ತ್ರವಿದರಾಗಿದ್ದಾರೆಂಬುದನ್ನೂ ತಾವು ಗಮನಿಸಬೇಕು."

**ಯಂಗ್ ಇಂಡಿಯಾ, ೧೧-೪-೧೯೨೯**

# " ತಮಿಳು ಸ್ತ್ರೀಯರನ್ನು ಕುರಿತು "

* [ " ಆಡಂಬರದ ಸಡಗರದ ಬಟ್ಟೆಗಳನ್ನುಟ್ಟವರಿಗೆ ದೇವರು ಮೆಚ್ಚನು; ಕಲಂಕವಿಲ್ಲದ ಬಿಳಿ ಖಾದಿ ಸೀರೆಯುನ್ನುಟ್ಟವರಿಗೆ ದೇವರು ನಿಜವಾಗಿಯೂ ಮೊದಲು ಮೆಚ್ಚುವನು. " ]

ತಿರುಪತಿಯಿಂದ ಮಿತ್ರರೊಬ್ಬರು ಹೀಗೆ ಬರೆಯುತ್ತಾರೆ: " ನಮ್ಮ ಚಳವಳಿಯ ಯಶಸ್ಸಿಗೆ ಅಡ್ಡಬರುವ ದೊಡ್ಡ ವಿಘ್ನವೆಂದರೆ ನಮ್ಮ ಮದ್ರಾಸಿನ ನಮ್ಮ ಸ್ತ್ರೀಯರೇ ಸರಿ. ಅವರಲ್ಲಿ ಕೆಲವರಂತೂ ಅತ್ಯಂತ ಪ್ರತಿಕ್ರಿಯಾಪ್ರವೃತ್ತಿಯವರು. ಬ್ರಾಹ್ಮಣ ಸ್ತ್ರೀಯರಲ್ಲಿ ಬಹು ಸಂಖ್ಯಾಕರು ಅನೇಕ ಪಾಶ್ಚಾತ್ಯ ದುರ್ಗುಣಗಳಿಗೆ ತುತ್ತಾಗಿದ್ದಾರೆ. ದಿನಕ್ಕೆ ಮೂರಕ್ಕಿಂತ ಹೆಚ್ಚು ಸಲ ಕಾಫಿ ಕುಡಿಯುತ್ತಾರೆ; ಹೆಚ್ಚೆಚ್ಚು ಸಾರೆ ಕುಡಿಯುವುದು ಹೆಚ್ಚೆಚ್ಚಿನ ಸಡಗರ (fashion) ವೆಂದು ಅವರು ಭಾವಿಸುವರು. ಉಡಿಗೆ ತೊಡಿಗೆಗಳಲ್ಲಂತೂ ಅವರ ಕೈ ಹಿಡಿದವರಿಲ್ಲ. ಅವರು ಮನೆಮಾರಿಗೆಯ ಅಗ್ಗದ ಬಟ್ಟೆ ಬಿಟ್ಟುಕೊಟ್ಟು ಅತ್ಯಂತ ತುಟ್ಟಿಯಾಗಿರುವ ಪರದೇಶಿ ಬಟ್ಟೆಗಳ ಬೆನ್ನುಹತ್ತಿದ್ದಾರೆ. ಆಭರಣಗಳ ಆಡಂಬರವಂತೂ ಉಳಿದವರಿಗಿಂತ ಬ್ರಾಹ್ಮಣ ಸ್ತ್ರೀಯರಲ್ಲಿ ಅತಿಯಾಗಿ ಬಿಟ್ಟಿದೆ. ಬ್ರಾಹ್ಮಣ ಸ್ತ್ರೀಯರಲ್ಲಿ ಶ್ರೀವೈಷ್ಣವರಂತೂ ಅತ್ಯಂತ ಅಪರಾಧಿಗಳೇ ಸರಿ. ಪುರುಷರು ಶುದ್ಧ ಜೀವನಕ್ಕೆ ಎಳಸುತಿರುವಾಗ ನಮ್ಮ ಸ್ತ್ರೀಯರೇ ದುಂದುಗಾರಿಕೆಗೆ ತುತ್ತಾಗುತ್ತಿದ್ದಾರೆ. ದೇವಾಲಯುಗಳಿಗೆ ಹೋಗುವಾಗಂತೂ ಸರಳ ಸಾದಾ ವೇಷವನ್ನು ಅವರು ಎಂದೂ ಅರಿಯರು. ಆ ಕಾಲದ ಸಡಗರಕ್ಕೆ ಅಳತೆಯೇ ಇಲ್ಲ. ಅತ್ಯಂತ ಅಮೌಲ್ಯ ಆಭರಣಗಳು ಆಗ ಬೇಕೇ ಬೇಕು; ಆಭರಣಗಳಿಗಿಂತ ಹೆಚ್ಚು ಅಮೌಲ್ಯವಾದ ರೇಶಿಮೆಯ ಲೇಸು (Lace) ಗಳಂತೂ ಮೊದಲು ಇರಬೇಕು. ಇಂಥ ಆಭರಣಗಳಾಗಲಿ ಆಡಂಬರದ ಸೀರೆಕುಪ್ಪಸಗಳಾಗಲಿ ಇಲ್ಲದಿದ್ದರೆ ತಾವು ಗುಡಿಗೇ ಹೋಗುವುದಿಲ್ಲವೆಂದು ಪ್ರಾಮಾಣಿಕರಾಗಿ ಹೇಳುವ ಅನೇಕ ಸ್ತ್ರೀಯರನ್ನು ನಾನು ಕಂಡಿದ್ದೇನೆ. "

---

* ಅಸಹಕಾರದ ಚಳವಳಿ (Non-co-operation Movement)

ಸ್ವತಃ ಅಸಹಕಾರಮಾಡಿ ವಕೀಲಿವೃತ್ತಿಗೆ ಜಲಾಂಜಲಿಯಿತ್ತ ನನ್ನ ಈ ವೈಷ್ಣವ ಮಿತ್ರರು ಹೇಳಿದ್ದೆಲ್ಲಾ ನಿಜವೆಂದು ನಾನು ನಂಬಲಾರೆ. ಆಡಂಬರದ ಆಧ್ಯತೆಯ ವಿಷಯದಲ್ಲಿ ತಮಿಳು ಸ್ತ್ರೀಯರು ಉಳಿದ ದೇಶದ ಭಗಿನಿಯರಿಗಿಂತ ಹೆಚ್ಚು ಅಪರಾಧಿಗಳೆಂದು ಹೇಳುವ ಮಾತನ್ನಂತೂ ನಾನು ಅಲ್ಲಗಳೆಯ ಬಯಸುತ್ತೇನೆ. ಏನೇ ಇರಲಿ, ನನ್ನ ಮಿತ್ರರ ಈ ಪತ್ರವು ತಮಿಳು ಭಗಿನಿಯರಿಗೆ ಒಂದು ಎಚ್ಚರಿಕೆಯಾದೀತೆಂದು ನಾನು ತಿಳಿಯುತ್ತೇನೆ. ಅವರು ಮೊದಲಿನಂತೆ ಸರಳ ಸಾದಾಜೀವನದ ರೀತಿಗೆ ಹೊರಳಲಿಕ್ಕೆ ಬೇಕು ಆಡಂಬರದ ಸಡಗರದ ಬಟ್ಟೆಗಳನ್ನುಟ್ಟವರಿಗೆ ದೇವರು ಮೆಚ್ಚನು; ಕಲಂಕವಿಲ್ಲದ ಬಿಳಿ ಖಾದಿ ಸೀರೆಯನ್ನುಟ್ಟವರಿಗೆ ದೇವರು ನಿಜವಾಗಿಯೂ ಮೊದಲು ಮೆಚ್ಚುವನು. ಗುಡಿಗಳು ಸಡಗರಕ್ಕಾಗಿ ಇರುವದಿಲ್ಲ. ನಮ್ರತೆ ಸರಳತೆಗಳೇ ಭಕ್ತಿಯ ಲಕ್ಷಣಗಳಾಗಿದ್ದು ಇಂಥ ಭಕ್ತಿಗೆ ಭಗವಂತನು ಮೆಚ್ಚುವನೇ ಹೊರತು ಹೊರಗಿನ ಆಡಂಬರಕ್ಕಲ್ಲ. ಈ ಪತ್ರದಲ್ಲಿ ದೂರವಾದ ಕೆಡುಕಿನ ವಿರುದ್ಧವಾಗಿ ಮದ್ರಾಸು ಪ್ರಾಂತದಲ್ಲಿ ನಿತ್ಯನಿರಂತರ ಪ್ರಚಾರ ನಡೆಯಲೇ ಬೇಕು.

**ಯಂಗ್ ಇಂಡಿಯಾ, ೨೫-೮-೧೯೨೧**

# ಸ್ತ್ರೀ ಸಮಸ್ಯೆಯ ಬಗ್ಗೆ ವಿವಿಧ ವಿಚಾರಗಳು

---

[ ಗಾಂಧಿಜಿಯವರ ವಿವಿಧ ಭಾಷಣ ಮತ್ತು ಲೇಖನಗಳಿಂದ ]

## ಸ್ತ್ರೀ ಪುರುಷರಲ್ಲಿ ಬಲಿಷ್ಠರಾರು ?

ಈ ದೊಡ್ಡ ಸಮಸ್ಯೆಯನ್ನು ನಾನು ಬಿಡಿಸುವುದು ರಾಷ್ಟ್ರವಾಗಲಿ ವ್ಯಕ್ತಿಯಾಗಲಿ ಜೀವನದ ಪ್ರತಿಯೊಂದು ದಾರಿಯಲ್ಲಿ ಅವರು ಸತ್ಯ ಮತ್ತು ಅಹಿಂಸೆಗಳನ್ನು ಸ್ವೀಕರಿಸುವುದರಿಂದಲೆ. ಈ ದೃಷ್ಟಿಯಿಂದ ಸ್ತ್ರೀಯು ನಿಃಸಂಶಯವಾಗಿ ನಾಯಕಿಯಾಗುವಳೆಂದು ನಾನು ಮಹದಾಶೆಯನ್ನು ತಳೆದಿದ್ದೇನೆ. ಇದರಿಂದ ಅವಳು ಮಾನವನ ಬೆಳವಣಿಗೆಯಲ್ಲಿ ತನ್ನ ಸ್ಥಾನವನ್ನು ಸಂಪಾದಿಸಿ ತಾನು ಅಬಲೆಯೆಂಬ ಭಾವವನ್ನು ತೊಡೆದು

ಹಾಕುವಳು. ............ ಯುರೋಪು ಅಹಿಂಸೆಯ ಪಾಠವನ್ನು ಮನನ ಮಾಡಿಕೊಳ್ಳುವುದಾದರೆ ಅದು ಹೆಂಗಸರಿಂದಲೆ ಸಾಧ್ಯವೆಂದು ನಾನು ನಿಜವಾಗಿಯೂ ನಂಬಿದ್ದೇನೆ ಶಾಂತರೀತಿಯ ನಿರೋಧವು ಅಶಕ್ತರ ಆಯುಧವೆಂದು ಜನರು ತಿಳಿದುಕೊಂಡಿದ್ದಾರೆ. ಆದರೆ ನಾನು ಹೇಳುವ ನಿರೋಧವು ಸುಯೋಧರ ಆಯುಧವಿದ್ದು ಅದರ ಸಲುವಾಗಿ ನಾನು ಪ್ರತ್ಯೇಕವಾದ ಹೆಸರನ್ನೆ ಆರಿಸಬೇಕಾಯಿತು. ನನ್ನ ಅರ್ಥ ಸ್ಪಷ್ಟ ಮಾಡಿಕೊಡಲಿಕ್ಕೆ ಇದನ್ನು ಹುಡುಕಬೇಕಾಯಿತು ಆದರೆ ಅದರ ಚೆಲುವಿನ ಮಹತ್ವವು ಅತ್ಯಂತವಿದೆ. ಅದು ಸಬಲರ ಆಯುಧವಷ್ಟೆ ಅಲ್ಲ, ದೇಹದಿಂದ ಅಶಕ್ತರಿದ್ದವರಿಗೂ ವಯಸ್ಸಾದವರಿಗೂ ಗಟ್ಟಿಜೆಯ ಬಾಲಕರಿಗೂ ಕೂಡ ಉಪಯುಕ್ತವಿದೆ. ಸತ್ಯಾಗ್ರಹದಲ್ಲಿ ನಿರೋಧವು ಅಂತರಂಗದಲ್ಲಿ ದುಃಖವನ್ನು ತಾಳಿಕೊಳ್ಳುವುದರಿಂದಲೆ ಇರುವುದರಿಂದ ಅದು ಮುಖ್ಯವಾಗಿ ಹೆಂಗಸರಿಂದಲೆ ಕೈಕೊಳ್ಳಬಹುದಾಗಿದೆ. ೧೯೩೦ರಲ್ಲಿ ಭಾರತೀಯ ಮಹಿಳೆಯರು ಕಷ್ಟಗಳನ್ನು ಸಹಿಸುವುದರಲ್ಲಿ ಎಷ್ಟೋ ಕಡೆ ತಮ್ಮ ಅಣ್ಣ ತಮ್ಮಂದಿರಿಗಿಂತಲೂ ಹೆಚ್ಚಿನ ಶಕ್ತಿ ತೋರಿಸಿದ್ದನ್ನು ನಾವು ನೋಡಿದ್ದೇವೆ. ಇಬ್ಬರೂ ಚಳವಳಿಯಲ್ಲಿ ಒಳ್ಳೆ ಕೆಲಸವನ್ನು ಕೈಕೊಂಡಿದ್ದರು. ಅಂತರಂಗದ ದುಃಖ ತಾಳಿಕೊಳ್ಳುವುದು ಒಂದು ಸುಂಕಾಗಿ ಪರಿಣಮಿಸಿ ಎಲ್ಲಗೂ ಅಂಥ ಅದ್ಭುತ ಕಾರ್ಯ ಮಾಡಲು ಉದ್ಯುಕ್ತರಾದರು. ಯುರೋಪಿನ ಮಹಿಳೆಯರು ಮತ್ತು ಮಕ್ಕಳು ಮಾನವ ಪ್ರೀತಿಯಿಂದ ಪ್ರಜ್ವಾಲಿತರಾದರೆ ಅವರು ಬಿರುಗಾಳಿಯಂತೆ ಒಮ್ಮೆಲೆ ಗಂಡಸರನ್ನು ಮರುಳುಮಾಡಿ ಸ್ವಲ್ಪ ವೇಳೆಯಲ್ಲಿಯೆ 'ಮಿಲಿಟರಿ' ಶಕ್ತಿಯನ್ನು ಕಡಿಮೆಮಾಡಿ ಬಿಡುವರು. ಹೆಂಗಸರಿಗೂ ಮಕ್ಕಳಿಗೂ ಒಂದೇ ಬಗೆಯ ಆತ್ಮ, ಒಂದೇ ಬಗೆಯ ಶಕ್ತಿ ಇರುವ ವಿಚಾರವೆ ಈ ಕಾರ್ಯದ ಹಿನ್ನೆಲೆ. ಕೊನೆಯಿಲ್ಲದ ಸತ್ಯದ ಶಕ್ತಿಯನ್ನು ಹೀರಿಕೊಳ್ಳುವದೊಂದೆ ಒಂದು ಸಮಸ್ಯೆ.

* * * *

## ಸ್ತ್ರೀಪುರುಷರ ಸಮಾನ ಹಕ್ಕುಗಳು

ಸ್ತ್ರೀಪುರುಷರು ಮೂಲತಃ ಆತ್ಮದಲ್ಲಿ ಒಂದೇ ರೀತಿಯಾಗಿರುವದರಿಂದ, ಅವರ ಸಮಸ್ಯೆಯ ತಿರುಳೂ ಹಾಗೆಯೆ ಇರಬೇಕೆಂದು ನನ್ನ ಅಭಿಪ್ರಾಯ.

ಇಬ್ಬರ ಅಂತರಂಗಗಳು ಒಂದೆ; ಅವರ ಭಾವನೆಗಳು ಒಂದೆ; ಅವರ ಜೀವನವು ಒಂದೆ. ಒಬ್ಬರ ಪ್ರತಿರೂಪ ಮತ್ತೊಬ್ಬರು. ಒಬ್ಬರ ನೆರವಿಲ್ಲದೆ ಇನ್ನೊಬ್ಬರು ಜೀವಿಸಲಾರರು. ........ ಅವರ ಕಾರ್ಯಗಳ ನೆಲೆ ನಿಶ್ಚಿತ ವಾದದ್ದಿರಲು ಸ್ತ್ರೀಪುರುಷರ ಸಾಮಾನ್ಯ ಸಂಸ್ಕೃತಿ ಮತ್ತು ಗುಣಗಳು ಸಹ ಒಂದೇ ರೀತಿಯವಾಗಿವೆ .. .... ಸ್ತ್ರೀ ಪುರುಷನ ಜೊತೆಗಾರ್ತಿ; ಅವನಷ್ಟೆ ಅವಳಿಗೆ ಬುದ್ಧಿಬಲವಿದೆ. ಪುರುಷನ ಪ್ರತಿಯೊಂದು ಕಾರ್ಯದಲ್ಲಿ ಭಾಗ ವಹಿಸಲು ಅವಳು ಅರ್ಹಳಿದ್ದಾಳೆ. ಅವನ ಸಂಗಡ ಸಲಿಗೆಯಿಂದ ಸ್ವಾತಂತ್ರ್ಯ ದಿಂದ ಇರಲು ಅವನಷ್ಟೆ ಅವಳಿಗೆ ಹಕ್ಕಿದೆ. ತನ್ನ ಕಾರ್ಯಗಳ ಕ್ಷೇತ್ರದಲ್ಲಿ ಉಚ್ಚಸ್ಥಾನ ದೊರಕಿಸಲು ಅವಳು ಪುರುಷನಂತೆಯೆ ಯೋಗ್ಯತೆಯುಳ್ಳವ ಳಾಗಿದ್ದಾಳೆ. ಇವೆಲ್ಲ ಓದುವುದರಿಂದಾಗಲಿ ಬರೆಯುವುದರಿಂದಾಗಲಿ ಕಲಿತು ಬರುವುವಲ್ಲ. ಸಹಜವಾಗಿ ನೈಸರ್ಗಿಕ ರೀತಿಯಿಂದ ಬರಬೇಕು. ತಿಳಿಗೇಡಿಗಳೂ ಅಯೋಗ್ಯರೂ ಆದ ಹಲವು ಗಂಡಸರು ನಮ್ಮೊಳಗಿರುವ ಕೀಳ್‌ಬಗೆಯ ಪಶುಶಕ್ತಿಯ ಸಹಾಯದಿಂದಲೆ ಹೆಂಗಸರಮೇಲೆ ತಮ್ಮ ಹಕ್ಕು ಹೆಚ್ಚಿಸಿ ನಲಿಯುತ್ತಿದ್ದಾರೆ. ಇದು ತೀರ ಅಯೋಗ್ಯವು. ಸಮಾಜ ದಲ್ಲಿ ಹೀಗಾಗಕೂಡದು. ನಮ್ಮ ಸ್ತ್ರೀಯರ ಈ ದೀನಸ್ಥಿತಿಯಿಂದಲೆ ನಮ್ಮ ಎಷ್ಟೋ ಕಾರ್ಯಗಳು ಅರ್ಧದಾರಿಯಲ್ಲಿಯೆ ನಿಂತುಬಿಡುತ್ತವೆ. ಆ ಕೆಲಸ ಗಳಿಗೆ ಸರಿಯಾದ ಫಲವೇ ದೊರೆಯುವದಿಲ್ಲ. ಸ್ತ್ರೀಪುರುಷರು ಒಂದೇ ಮೆಟ್ಟಲಿನಲ್ಲಿದ್ದರೂ ಒಬ್ಬರಂತೆ ಮತ್ತೊಬ್ಬರಲ್ಲ. ಅವರಿಬ್ಬರೂ ವೈಭವ ಯುಕ್ತ ಸಹಯೋಗಿಗಳು. ಒಬ್ಬರು ಮತ್ತೊಬ್ಬರಿಗೆ ಪೋಷಕವಾಗುತ್ತಾರೆ. ಒಬ್ಬರ ನೆರವಿಲ್ಲದೆ ಇನ್ನೊಬ್ಬರ ಜೀವಿತಾರ್ಥವಿಲ್ಲ. ಈ ವಾಸ್ತವಾಂಶಗಳಿಂದ ಅವರಲ್ಲಿ ಯಾರಿಗಾದರೂ ಅವಹೇಳನವಾದರೆ ಅದು ಇಬ್ಬರ ನಾಶಕ್ಕೂ ಕಾರಣವಾಗುವದೆಂಬುದು ತಾನೇ ಗೊತ್ತಾಗುತ್ತದೆ.

* * * *

## ಬಾಲವಿಧವೆಯರ ಬಗ್ಗೆ ತರುಣರ ಕರ್ತವ್ಯ

ನನ್ನ ಸುತ್ತುಮುತ್ತಲಿರುವ ತರುಣರೆ, ಶೌರ್ಯದ ಸ್ಪರ್ಶವು ನಿಮಗಿರ ಬೇಕೆಂದು ನನ್ನ ಆಶೆ. ವಿಧವೆಯಲ್ಲದವಳನ್ನು ಮದುವೆಯಾಗುವದಿಲ್ಲ

ವೆಂದೂ, ಬಾಲವಿಧವೆಯ ಲಗ್ನವೆ ನಿಮಗೆ ಬೇಕಾಗಿರುವದೆಂದೂ, ಅಂಥ ಬಾಲವಿಧವೆ ದೊರೆಯದಿದ್ದರೆ ಮದುವೆಯನ್ನೇ ಮಾಡಿಕೊಳ್ಳುವದಿಲ್ಲವೆಂದೂ ಇಂದೇ ಧಾರ್ಮಿಕ ಪಣ ತೊಡಬೇಕೆಂದು ನಾನು ನಿಮ್ಮನ್ನು ಕೇಳಿ ಕೊಳ್ಳುತ್ತೇನೆ. ಈ ನಿಶ್ಚಯವನ್ನು ಮಾಡಿರಿ. ಇದನ್ನು ಜಗತ್ತಿಗೆ ಹೇಳಿರಿ. ನಿಮ್ಮ ತಂದೆತಾಯಿಗಳಿದ್ದರೆ ಅವರಿಗೆ ಹೇಳಿರಿ. ಅಥವಾ ನಿಮ್ಮ ಅಕ್ಕ ತಂಗಿಯರಿಗೆ ಹೇಳಿರಿ. ತನ್ನ ಮೂಲಭೂತ ಬೇಕುಗಳನ್ನಿಚ್ಛಿಸಿದಾಗ ಸಮಾಜವು ಬಲಾತ್ಕಾರದಿಂದ ವಿಧವೆಯನ್ನು ಹತ್ತಿಕ್ಕುವ ಒಂದು ಉದಾಹರಣೆ ಕಂಡು ಬರುತ್ತಿದ್ದರೆ ೪೦ ಕೋಟಿ ಜನರುಳ್ಳ ಈ ರಾಷ್ಟ್ರದ ದೈವವನ್ನು ಹೇಗೆ ಸುಧಾರಿಸುವುದು ? ನಮ್ಮ ದೇಶದ ಪರಿಸ್ಥಿತಿ ಹೀಗಿರಲು ನಾವು ಮನುಷ್ಯರೆಂದು ನೀವು ತಿಳಿದುಕೊಳ್ಳುವುದು ಹೇಗೆ ? ನಾವು ನಮ್ಮನ್ನಾಗಲಿ ಹೆರವರನ್ನಾಗಲಿ ಆಳುವ ಯೋಗ್ಯತೆಯುಳ್ಳವರೆಂದು ನೀವು ಕಲ್ಪಿಸುವದಾದರೂ ಹೇಗೆ ? ಇದು ಧರ್ಮವಲ್ಲ, ಅಧರ್ಮವು.

*     *     *     *

## ಭಿನ್ನಾಭಿಪ್ರಾಯದ ಸತಿಪತಿಗಳು

ಸತಿಪತಿಗಳಲ್ಲಿ ಯಾರೊಬ್ಬರು ಸಾಮಾನ್ಯ ವಿಚಾರಗಳಿಗಿಂತ ಭಿನ್ನ ವಿಚಾರ ಹೊಂದಿದ ಪಕ್ಷದಲ್ಲಿ ರಸಕಸಿಯ ಹೆದರಿಕೆ ಇದ್ದೇ ಇರುತ್ತದೆ. ನಮ್ಮ ಸಮಾಜದಲ್ಲಿ ಪತಿಯಾದವನು ಯಾವ ಶಿಷ್ಟಾಚಾರವನ್ನೂ ಪಾಲಿಸುವದಿಲ್ಲ. ತನ್ನ ಜೊತೆಗಾತಿಯ ಅಭಿಪ್ರಾಯವನ್ನು ಕೇಳುವುದೂ ತನ್ನ ಒಂದು ಕರ್ತವ್ಯವೆಂದು ಅವನು ಭಾವಿಸುವುದೇ ಇಲ್ಲ. ತನ್ನ ಹೆಂಡತಿ ತನ್ನ ಆಸ್ತಿಯೆಂದು ಅವನ ಭಾವನೆ. ಹೀಗಿರಬಾರದು. ತನ್ನ ಪತಿಯ ಸ್ವಾಮಿತ್ವದಲ್ಲಿ ನಂಬಿಗೆಯಿಟ್ಟ ಅಭಿಪ್ರಾಣಿಯಾದ ಆ ಹೆಂಡತಿ ತನ್ನೆಲ್ಲಾ ಸ್ವಂತ ವಿಚಾರಗಳನ್ನು ಹತ್ತಿಕ್ಕುತ್ತಾಳೆ. ಸತಿಯಾದವಳಿಗೆ ತನ್ನ ವಿಚಾರಗಳು ಸರಿಯೆಂದು ಮನವರಿಕೆಯಾಗಿದ್ದರೆ ತನ್ನ ಅಭಿಪ್ರಾಯಕ್ಕಾಗಿ ಹೋರಾಡಿ ಪರಿಣಾಮಗಳನ್ನು ಶಾಂತರೀತಿಯಿಂದ ಎದುರಿಸುವ ಹಕ್ಕು ಆಕೆಗೆ ಇದೆ. ಆದರೆ ಆಕೆಯ ಉದ್ದೇಶ ಮಾತ್ರ ಹೆಚ್ಚು ಉದಾತ್ತವಾದದ್ದಿರಬೇಕು, ಇಷ್ಟೇ.

*     *     *     *

## ಸ್ತ್ರೀಯರೂ ಪುರುಷರೂ

ಸ್ತ್ರೀಪುರುಷರು ಸತ್ಯಾಗ್ರಹದ ಚಟುವಟಿಕೆಗಳಲ್ಲಿ ಒಟ್ಟಿಗೆ, ಸ್ವಚ್ಛಂದ ರೀತಿಯಲ್ಲಿ ಕಾರ್ಯಮಾಡುತ್ತ ಹೋಗಬೇಕೇ ಪ್ರತ್ಯೇಕವಾಗಿ ಕಾರ್ಯ ಮಾಡಬೇಕೇ? ಎಂದು ಜನ ನನ್ನನ್ನು ಕೇಳುವುದುಂಟು. ಪ್ರತ್ಯೇಕ ಶಿಬಿರಗಳೇ ಇರುವುದು ಒಳ್ಳೇದೆಂದು ನನಗೆ ತೋರುವುದು. ಸ್ತ್ರೀಯರು ತಮ್ಮ ಮಧ್ಯದಲ್ಲಿಯೇ ಮಾಡಬೇಕಾದ ಕಾರ್ಯ ಬೇಕಾದಷ್ಟಿದೆ. ಸ್ತ್ರೀಜನತೆಯನ್ನು ಭಯಂಕರವಾಗಿ ದುರ್ಲಕ್ಷಿಸಲಾಗಿದ್ದು, ನಿಃಸೀಮ ಪ್ರಾಮಾಣಿಕತೆಯುಳ್ಳ ನೂರಾರು ಬುದ್ಧಿವಂತ ಕೆಲಸಗಾರ್ತಿಯರು ಈ ಕೆಲಸಕ್ಕೇ ನಮಗೆ ಬೇಕಾಗಿದೆ. ತತ್ತ್ವತಃ ಮಾತನಾಡುವದಾದರೂ ಸ್ತ್ರೀಪುರುಷರು ಪ್ರತ್ಯೇಕವಾದ ಶಿಬಿರಗಳ ಮುಖಾಂತರ ಕಾರ್ಯ ಮಾಡುವದರಲ್ಲಿಯೇ ನನ್ನ ನಂಬಿಗೆ ಇದೆ. ಆದರೆ ಇಂಥ ಸಂದರ್ಭಗಳಲ್ಲಿ ನಿಷ್ಠುರ ನಿಯಮಗಳನ್ನು ಹಾಕಿಕೊಡುವುದು ಸಾಧ್ಯವಲ್ಲ. ಗಂಡಸು ಹೆಂಗಸು ಇವರಿಬ್ಬರ ನಡುವೆ ಇದ್ದ ಸಂಬಂಧದ ವಿಷಯದಲ್ಲಿ ಸುವಿವೇಕವು ಜಾಗ್ರತವಾಗಿ ಕಾರ್ಯ ಮಾಡುತ್ತಿರಬೇಕು. ಅವರಿಬ್ಬರ ನಡುವೆ ಯಾವ ಅಡ್ಡಗೋಡೆಯೂ ನಿಂತಿರಬಾರದು. ಅವರೊಳಗಿನ ಪರಸ್ಪರ ವರ್ತನೆಯು ಸ್ವಾಭಾವಿಕವಾದದ್ದೂ ಸಹಜ ಪ್ರೇರಣಾಯುಕ್ತವಾದದ್ದೂ ಇರಬೇಕು.

## ಸ್ತ್ರೀಯರೂ ಮನೆಗೆಲಸವೂ

ಸ್ತ್ರೀಯರು ಸಾರ್ವಜನಿಕ ಕ್ಷೇತ್ರದಲ್ಲಿ ಕೆಲಸಗಾರ್ತಿಯರಾದರೆ ತನ್ನ ಮನೆವಾರ್ತೆಯನ್ನೂ ಮಕ್ಕಳನ್ನೂ ಅಲಕ್ಷಿಸಿದಂತಾಗುವದಿಲ್ಲವೇ ಎಂದು ನನಗೆ ಒಬ್ಬರು ಪ್ರಶ್ನಿಸಿದ್ದಾರೆ. ನಮ್ಮ ಹೆಣ್ಣುಮಕ್ಕಳ ಹೊತ್ತೆಲ್ಲಾ ಕೇವಲ ಮನೆಗೆಲಸಗಳಲ್ಲಿ ಕಳೆಯುತ್ತದೆಂಬುದನ್ನು ನಾನು ನಂಬಲಾರೆ. ಸ್ವಯಂ ಮೂಢನಾದ ಗಂಡನ ಕ್ರೀಡಾವೃತ್ತಿಯನ್ನೂ ಅದಲ್ಲದೆ ತನ್ನ ಒಣ ಹೆಮ್ಮೆಯನ್ನೂ ತೃಪ್ತಿಪಡಿಸುವದರಲ್ಲಿಯೇ ಸತಿಯಾದವಳ ವೇಳೆ ವ್ಯರ್ಥವಾಗಿ ಕಳೆಯುತ್ತದೆ. ಗೃಹಿಣಿಯ ಈ ಗೃಹದಾಸ್ಯವು ಅನಾಗರಿಕತೆಯ ಲಕ್ಷಣವೇ ಸರಿ. ಹೆಂಗಸು ಅಡಿಗೆಮನೆಗೆ ಮೀಸಲಾಗಿರುವ ದುರ್ಭಾಗ್ಯವು ನಮ್ಮ ಕಾಡು ಪ್ರವೃತ್ತಿಯ ಚಿನ್ಹವಾಗಿದೆ. ಈ ಸೆರೆಯಿಂದ ನಮ್ಮ ಹೆಣ್ಣುಮಕ್ಕಳು

ಬಿಡುಗಡೆ ಹೊಂದಲೇಬೇಕಾದ ಸಮಯ ಪ್ರಾಪ್ತವಾಗಿದೆ. ದಿನದ ಎಲ್ಲ ಹೊತ್ತನ್ನೂ ಮನೆಗೆಲಸವು ತೆಗೆದುಕೊಳ್ಳಬಾರದು.

* * * *

## ಸ್ತ್ರೀಯರೂ ಅಹಿಂಸೆಯೂ

ಈ ಅಹಿಂಸೆಯ ಶಾಂತಿಸಂಗ್ರಾಮದಲ್ಲಿ ಗಂಡಸರಿಗಿಂತ ಹೆಂಗಸರ ಕೆಲಸ ಹೆಚ್ಚಿಗೆ ಇದೆ. ಮಹಿಳೆಯರನ್ನು ಅಬಲೆಯರೆಂದು ಕರೆಯುವದು ವಾಣಿಯ ಅಪಾರ್ಥವೇ ಸರಿ; ಪುರುಷನು ಸ್ತ್ರೀಗೆ ಮಾಡುವ ಅಪಮಾನವದು. ಶಕ್ತಿ ಎಂದರೆ ಅರ್ಥ ಪಶುಶಕ್ತಿ ಎಂದೇ ಆಗುವದಾದರೆ ಸ್ತ್ರೀಯು ಪುರುಷನಿಗಿಂತ ಕಡಿಮೆ ಪಶುಶಕ್ತಿಯುಳ್ಳವಳೇ ಸರಿ. ಆದರೆ ಶಕ್ತಿಗೆ ನೈತಿಕಶಕ್ತಿಯೆಂದು ಅರ್ಥ ಹೇಳಿದಲ್ಲಿ ಹೆಂಗಸು ಗಂಡಸಿಗಿಂತಲೂ ಅಪಾರ ಶಕ್ತಿಯುಳ್ಳವಳಾಗಿದ್ದಾಳೆ. ಆಕೆಯಲ್ಲಿ ಹೆಚ್ಚಿನ ತಾಳ್ಮೆ, ಧೈರ್ಯಗಳಿಲ್ಲವೇ? ಸ್ತ್ರೀ ಇಲ್ಲದೆ ಪುರುಷನೇ ಇಲ್ಲ. ಅಹಿಂಸೆಯೇ ಜೀವನದ ಧರ್ಮವಾದಲ್ಲಿ ಭವಿಷ್ಯವನ್ನು ಸ್ತ್ರೀಯರೇ ರೂಪಿಸಬಲ್ಲರು.

* * * *

## ಸ್ತ್ರೀಯರೂ ರಾಷ್ಟ್ರಸೇವೆಯೂ

ವಿದ್ಯಾರ್ಥಿನಿಯರೇ, ನೀವು ಕೇವಲ ಪಡಿಯಚ್ಚಿನ ಗೊಂಬೆಗಳಾಗಬೇಕೆಂದು ನಿಮ್ಮ ತಾಯಿತಂದೆಗಳು ನಿಮ್ಮನ್ನು ಶಾಲೆಗೆ ಕಳಿಸುವದಿಲ್ಲ. ನೀವು ದಯಾಮೂರ್ತಿ (Sisters of Mercy) ಗಳಾಗಬೇಕೆಂದು ಅವರ ಅಪೇಕ್ಷೆಯಿರುತ್ತದೆ. ತನಗಿಂತ ಬಡವರೂ ದುರ್ದೈವಿಗಳೂ ಆದವರ ಯೋಗಕ್ಷೇಮವನ್ನು ಹೆಚ್ಚೆಚ್ಚು ವಹಿಸುತ್ತ ತನ್ನ ಬಗ್ಗೆ ಕಡಿಮೆ ಆಸಕ್ತಿ ವಹಿಸುವ ವ್ಯಕ್ತಿಯೇ ನಿಜವಾದ ಸೇವಾಮೂರ್ತಿ.

* * * *

## ಸತಿ ಹೋಗುವ ಪದ್ಧತಿಯ ಅವಿಚಾರ

ಗಂಡನ ಮರಣದ ಅನಂತರ ಹೆಂಗಸು ತನ್ನ ನಾಶಮಾಡಿಕೊಳ್ಳುವದೇ ಈ ಪದ್ಧತಿಯಲ್ಲಿಯ ದ್ಯೋತಕಚಿಹ್ನ. ಆದರೆ ಆತ್ಮದ ರೂಪವು

ತಿಳಿಯದ ಅಜ್ಞಾನತೆಯಿಂದ ಹೀಗಾಗುತ್ತದೆ. ಆತ್ಮವು ಅಮರವಾಗಿದೆ, ಅವಿಕಾರಿಯಾಗಿದೆ. ನಿಜವಾದ ಲಗ್ನವು ದೇಹಗಳ ಸಮ್ಮಿಲನವಲ್ಲ, ಆದರೆ ಆತ್ಮಗಳ ಹೊಂದುಗೂಡಿಕೆ.

* * * *

## ರಾಷ್ಟ್ರಸೇವೆಯಲ್ಲಿ ಭಾರತದ ಸ್ತ್ರೀಯರ ಸ್ಥಾನ

ಸಾಮ್ರಾಜ್ಯಬಂಧನದೊಳಗಿಂದ ಮುಕ್ತರಾಗಲು ಹೂಡಿದ ಸ್ವಾತಂತ್ರ್ಯದ ಶಾಂತಿಸಂಗ್ರಾಮದ ಕಾರ್ಯಕ್ರಮದಲ್ಲಿ ರಾಟೆಯನ್ನು ಪುನರುಜ್ಜೀವಿಸಿ ಅದಕ್ಕೆ ಕೇಂದ್ರಸ್ಥಾನ ಕಲ್ಪಿಸಿ ಸ್ತ್ರೀಯರಿಗೆ ವಿಶಿಷ್ಟ ಸ್ಥಾನ ಕೊಡಲಾಗಿದೆ. ನೇಯುವದರಲ್ಲಿ ನೀವು (ಹೆಂಗಸರು) ಗಂಡಸರಿಗಿಂತಲೂ ಹೆಚ್ಚು ಕುಶಲರು. ........ ಆದ್ದರಿಂದ ಪೂರ್ವಕಾಲದಲ್ಲಿದ್ದಂತೆ ಈಗಾದರೂ ಈ ಕೆಲಸದ ಭಾರವನ್ನು ನೀವೇ ಹೊರಬೇಕು. ಎರಡು ನೂರು ವರ್ಷಗಳ ಹಿಂದೆ ಭಾರತೀಯ ಮಹಿಳೆಯರು ತಮ್ಮ ಮನೆಗಷ್ಟೇ ನೇಯದೆ, ಪರದೇಶಕ್ಕೂ ತಾವು ನೆಯ್ದ ಬಟ್ಟೆ ಪೂರೈಸಿದರು. ........ ಈ ರೀತಿಯಾಗಿ ಹಿಂದುಸ್ಥಾನದ ಆರ್ಥಿಕ ಮತ್ತು ನೈತಿಕ ಉದ್ಧಾರವು ನಿಮ್ಮಿಂದಲೇ ಆಗಬೇಕಾಗಿದೆ. ಮುಂಬರುವ ಜನಾಂಗವನ್ನು ನೀವೇ ಲಾಲಿಸುವವರಾದ್ದರಿಂದ, ಹಿಂದೂಸ್ಥಾನದ ಭವಿತವ್ಯವು ನಿಮ್ಮ ತೊಡೆಗಳ ಮೇಲೆಯೆ ಇದೆ. ಭಾರತದ ಶಿಶುಗಳನ್ನು ಸರಳಹೃದಯ, ದೇವಭಕ್ತಿ, ಕಾರ್ಯವಂತಿಕೆಗಳಿಂದ ಕೂಡಿದ ಸ್ತ್ರೀಪುರುಷರಾಗುವಂತೆಯಾದರೂ ನೀವು ಬೆಳೆಯಿಸಬಹುದು; ಇಲ್ಲವೆ ಅವರನ್ನು ಅಶಕ್ತರನ್ನಾಗಿ ಮಾಡಿ ಜೀವನದ ಬಿರುಗಾಳಿಗಳನ್ನೆದುರಿಸಲು ಅಯೋಗ್ಯರನ್ನಾಗಿಯಾದರೂ ಮಾಡಬಹುದು. ........ ಪ್ರತಿದಿನಕ್ಕೆ ಒಂದು ಆಣೆಯನ್ನಾದರೂ ಗಳಿಸದ ಅಸಂಖ್ಯ ಭಾರತೀಯ ಮಹಿಳೆಯರ ಸಲುವಾಗಿ ನಾನು ನನ್ನ ನೂಲುವ ರಾಟೆಯನ್ನು ಹಿಡಿದುಕೊಂಡು ಭಿಕ್ಷೆ ಬೇಡುತ್ತ ದೇಶದ ತುಂಬ ಓಡಾಡುತ್ತಿದ್ದೇನೆ.

* + * *

## ಸ್ತ್ರೀಯರೂ ಅಸ್ಪೃಶ್ಯತೆಯೂ

ನಿಮ್ಮ ಹೃದಯದಿಂದ ಅಸ್ಪೃಶ್ಯತೆಯನ್ನು ಬೇರುಸಹಿತ ಕಿತ್ತೊಗೆಯುವದು ಎಲ್ಲ ಕೆಲಸಗಳಲ್ಲಿ ಮುಖ್ಯವಾದುದೆಂದು ತಿಳಿದಿದ್ದೇನೆ. ನಿಮ್ಮ ಮಕ್ಕಳಂತೆಯೆ ಹರಿಜನರ ಬಾಲ–ಬಾಲಿಕೆಯರನ್ನು ನೋಡಿಕೊಳ್ಳಬೇಕು. ನಿಮ್ಮ ಬಳಗದವರಂತೆ, ನಿಮ್ಮ ಅಣ್ಣತಂಗಿಯರಂತೆ, ಭಾರತಾಂಬೆಯ ಮಗುಗಳಂತೆ ನೀವು ಅವರನ್ನು ಪ್ರೀತಿಸಬೇಕು. ಆತ್ಮಾರ್ಪಣೆ ಮತ್ತು ಸೇವೆ ಈ ಸದ್ಗುಣಗಳ ಜೀವಂತ ಮೂರ್ತಿಗಳೆ ಸ್ತ್ರೀಯರೆಂದು ನಾನು ಅವರನ್ನು ಪೂಜಿಸುತ್ತೇನೆ. ನಿಃಸ್ವಾರ್ಥಬುದ್ಧಿಯು ಕಾರ್ಯಶಕ್ತಿಯು ನೈಸರ್ಗಿಕವಾಗಿಯೆ ನಿಮಗೆ ಬಂದಿದೆ. ಈ ಸದ್ಗುಣಗಳಲ್ಲಿ ಪುರುಷನು ನಿಮಗೆ ಸರಿಗಟ್ಟಲಾರ. ದುಃಖದ ದೃಶ್ಯವನ್ನು ನೋಡಿದರೆ ಮಹಿಳೆಯ ಕಾರುಣ್ಯಮಯ ಹೃದಯವು ಕರಗಿ ನೀರಾಗುತ್ತದೆ. ಹೀಗಿರಲಾಗಿ ಹರಿಜನರ ದುಃಖವನ್ನು ನೋಡಿ ನೀವು ಮರುಗುವಿರಾದರೆ, ಕೀಳು ಮೇಲೆಂಬ ಭೇದ ಮಾಡದೆ ಅಸ್ಪೃಶ್ಯತೆಯನ್ನು ನೀವು ತ್ಯಜಿಸುವಿರಾದರೆ, ಹಿಂದುತ್ವವು ಶುಚಿರ್ಭೂತವಾಗುವದು; ಹಿಂದೂ ಸಮಾಜವು ಮೋಕ್ಷಮಾರ್ಗದತ್ತ ಒಂದು ದೊಡ್ಡ ಹೆಜ್ಜೆ ಇಡುವುದು ........ ಕಟ್ಟಕಡೆಗೆ ೩೫ ಕೋಟಿ ಜನರುಳ್ಳ ಅಖಿಲ ಭಾರತದ ಹಿತವು ಬೇಗನೆ ಸಾಧಿಸುವದು ಐದರಲ್ಲಿ ಒಂದಂಶ ಮಾನವ ಜನಾಂಗವು ಈ ಅದ್ಭುತವಾದ ನಿರ್ಮಲದಾರಿಯನ್ನು ಹಿಡಿದರೆ, ಸಕಲ ಮಾನವಜನಾಂಗದ ಮೇಲೆ ಹಿತವಾದ ಪರಿಣಾಮವಾಗದೆ ಇರದು.

*　　*　　*　　*

## ಅಸಹ್ಯ ಪರ್ದಾ ಪದ್ಧತಿ

ತೆರೆಯ ಹಿಂದಿರುವ ಜನರನ್ನು ಕುರಿತು ಬಂಗಾಲಿನ ದರ್ಭಾಂಗಿನಲ್ಲಿ ಒಂದು ನಾನು ಮಾತಾಡಬೇಕಾಯಿತು. ನನ್ನೆದುರಿಗೆ ಪುರುಷಶ್ರೋತೃವೃಂದವಿದ್ದಿತು. ನನ್ನ ಹಿಂದೆ ಪರದೆಯಿತ್ತು. ಆದರ ಹಿಂದೆ ಹೆಣ್ಣುಮಕ್ಕಳಿದ್ದಾರೆಂದು ನನ್ನ ಲಕ್ಷ್ಯಕ್ಕೆ ತರುವವರೆಗೆ ನನಗೆ ಗೊತ್ತಿರಲಿಲ್ಲ. ಪರದೆಯ ಹಿಂದಿರುವ ಆ ಅಜ್ಞಾತ ಸ್ತ್ರೀಯರನ್ನು ಕುರಿತು ನಾನು ಮಾತಾಡುವಾಗ ತೆರೆಯ ಹಿಂದೆ ಎಷ್ಟು ಜನರಿದ್ದರೋ ಯಾರಾರು ಇದ್ದರೋ ನನಗೆ

ತಿಳಿಯಲಿಲ್ಲ. ಅದು ನನಗೆ ಅಸಹ್ಯ ವೇದನೆಯನ್ನುಂಟುಮಾಡಿತು; ನನ್ನ ತಲೆ ನಾಚಿಕೆಯಿಂದ ಬಾಗಿತು. ಸ್ತ್ರೀಯರಿಗೆ ನಾವು ಮಾಡುತ್ತಿದ್ದ ಅನ್ಯಾಯದ ಪರಮಾವಧಿಯೇ ಅದು ಎಂದು ನನಗೆ ಎನಿಸಿತು. ಅರ್ಥವಿಲ್ಲದ ಒಂದು ಕಿಗ್ಗಳು ರೂಢಿಗೆ ನಾವು ಬಲಿಬಿದ್ದು ಹೆಣ್ಣುಮಕ್ಕಳಿಗೆ ನಾವು ಸಾವಿರಾರು ವರ್ಷಗಳಿಂದ ಅಪಮಾನ ಮಾಡುತ್ತಿದ್ದೇವೆ. ಈ ರೂಢಿ ಪ್ರಾರಂಭವಾದಾಗ ಅದರ ಒಳ್ಳೇ ಉಪಯೋಗವೇನಿರಬಹುದಿತ್ತೋ ಅದಾವುದೂ ಈಗ ಉಳಿದಿಲ್ಲ. ಈಗ ಅದು ಸಂಪೂರ್ಣ ನಿರುಪಯೋಗಿ ನಿರ್ಜೀವ ರೂಢಿಯಾಗಿದ್ದರೂ ಸುಶಿಕ್ಷಿತರೆನಿಸಿಕೊಳ್ಳುವವರೂ ಅದಕ್ಕೆ ಅಂಟಿಕೊಂಡು ಸಮಾಜಕ್ಕೆ ಹಾನಿಯನ್ನು ಉಂಟುಮಾಡುತ್ತಿದ್ದಾರೆ. ನೂರಾರು ವರ್ಷಗಳಿಂದ ನಾವು ಪಡೆಯುತ್ತಿದ್ದ ಶಿಕ್ಷಣವೆಲ್ಲಾ ಬೋರ್ಗಲ್ಲಮೇಲೆ ಮಳೆಗರೆದಂತಾಗಿದೆ. ಕಲಿತವರಿಗೆ ಈ ಪಾಶವೀರೂಢಿ ಕೆಟ್ಟದೆಂದು ಒಳಗೆ ಎನಿಸಿದರೂ ಅದನ್ನು ಎದುರಿಸಿ ಒಮ್ಮೆಲೆ ಹೊಡೆದುಹಾಕುವ ಧೈರ್ಯ ಅವರಲ್ಲಿಲ್ಲ. ನಮ್ಮ ಪುರುಷರಿಗಿದ್ದ ಸ್ವಾತಂತ್ರ್ಯವನ್ನು ನಮ್ಮ ಸ್ತ್ರೀಯರೂ ಏಕೆ ಅನುಭವಿಸಬಾರದು? ಹೊರಗೆ ಸ್ವಚ್ಛಂದವಾಗಿ ನಳನಳಿಸುವ ವಾತಾವರಣದಲ್ಲಿ ಅವರೇಕೆ ಅಡ್ಡಾಡಬಾರದು?

ಪಾತಿವ್ರತ್ಯವೆಂಬುದು ಹೊರಿಸಿದ ಹೊರೆಯಾಗಬಾರದು; ಈ ಮುಸುಕು ಮೊದಲಾದ ಬಾಹ್ಯರೀತಿಗಳಿಂದ ಅದು ರಕ್ಷಿಸಲ್ಪಡಲಾಗದು. ಅದು ಒಳಗಿಂದ ಬೆಳೆದು ಮಾಗಿ ಬರಬೇಕು. ಯಾವ ಆಶೆಗೂ ಬಲಿಬೀಳದಷ್ಟು ಅದು ಸ್ವಯಂ ಸಮರ್ಥವಾಗಬೇಕು. ಗಂಡಸರ ದೃಷ್ಟಿಗೆ ಬಿದ್ದರೆ ಪಾತಿವ್ರತ್ಯ ಹಾಳಾಗುವದೆಂಬುದು ನಿಜವಿದ್ದರೆ ಅದರಂಥ ನಿಃಸತ್ವ ವಸ್ತುವೇ ಇಲ್ಲ. ಇಂಥ ಅಂಥ ರೂಢಿಗಳಿಂದ ಸ್ತ್ರೀಯರನ್ನು ನಿರ್ಬಲರನ್ನಾಗಿ ಮಾಡುತ್ತ ನಾವು ಸಮಾಜವನ್ನು ಅರ್ಧಾಂಗಪೀಡಿತವನ್ನಾಗಿ ಮಾಡುತ್ತಿದ್ದೇವೆ. ನೀತಿಯೆಂಬುದು ನಮ್ಮ ಹೃದಯದ ಅಂತರಾಳದಲ್ಲಿ ಬೇರೂರಬೇಕಾದ ವಸ್ತುವು. ಈ ಮಾತಿಗೆ ಸೀತೆಯೇ ಸಾಕ್ಷಿ. ನಮ್ಮ ಪುರುಷರನ್ನು ಸ್ತ್ರೀಯರು ನಂಬಲೇಬೇಕು! ಅದರಂತೆ ಸ್ತ್ರೀಯರನ್ನು ಈ ಪುರುಷರು ಪುರುಷರಾಗಿದ್ದರೆ ನಂಬಲೇಬೇಡವೇ? ಸೀತೆಯಿಲ್ಲದೆ ರಾಮನುಂಟೇ? ದ್ರೌಪದಿಯಂತೂ ವೀರ ಸ್ವತಂತ್ರ ಮಹಿಳೆ. ಬಲಭೀಮನನ್ನೂ ತನ್ನ ಮನ

ಬಂದಂತೆ ಮಣಿಸಿದ ಮಹಾ ಪತಿವ್ರತೆ. ಅನ್ಯರಿಗೆ ಭೀಮನು ವೃಕೋದರ ನಾದರೆ ದ್ರೌಪದಿಯ ಮುಂದೆ ಆತ ಒಂದು ಕುರಿಮರಿ. ದ್ರೌಪದಿಗೆ ಯಾವ ಪಾಂಡವರಿಂದಲೂ ರಕ್ಷಣೆ ಬೇಕಿರಲಿಲ್ಲ ಇಂದು ನಮ್ಮ ಸ್ತ್ರೀಯರನ್ನು ದಾಸ್ಯದ ಶೃಂಖಲೆಗಳಿಂದ ಬಿಗಿದು ಸ್ತ್ರೀತ್ವದ ಸ್ವಚ್ಛಂದ ಪ್ರಗತಿಗೆ ನಾವೇ ಅಡ್ಡಬರುತ್ತೇವೆ. ಸ್ತ್ರೀತ್ವದ ಸ್ವಚ್ಛಂದ ಪ್ರಗತಿಯಾಗದ್ದರಿಂದ ಸ್ವತಂತ್ರ ವೃತ್ತಿಯ ಪೌರುಷವು ಬೆಳೆಯದಾಗಿದೆ. ನಮ್ಮ ಹೆಣ್ಣುಮಕ್ಕಳು ಹಾಗು ಹರಿಜನರಿಗೆ ಮಾಡುವ ಅನ್ಯಾಯದ ಪಾಪದ ಕೊಡವು ಸಾವಿರಾರು ವರ್ಷ ಗಳಿಂದ ತುಂಬುತುಂಬುತ್ತ ನಡೆದಿದೆ. ಈ ಪಾಪದ ಭಾರ ನಮ್ಮೆಲ್ಲರ ತಲೆಯಮೇಲಿದೆ ನಾವು ನಿರ್ಬಲರೂ ಚಂಚಲರೂ ಮಂದಮತಿಗಳೂ ಆಗಿದ್ದೇವೆ. ಆದ್ದರಿಂದ ಒಂದೇ ಒಂದು ಮಹಾಪ್ರಯತ್ನದಿಂದ ಈ ಮುಸುಕಿನ ತೆರೆಯನ್ನು ಹರಿದೊಗೆಯುವಾ

* * * ÷

## ಸಮಾಜ ಸುಧಾರಣೆಯೂ ಸ್ವರಾಜ್ಯವೂ

ನಮ್ಮ ಸಾಮಾಜಿಕ ಪಾಪಗಳನ್ನು ನಾವು ಬೇಗನೆ ಮನನ ಮಾಡಿ ಕೊಂಡಷ್ಟು, ನಮ್ಮ 'ಸ್ವರಾಜ್ಯ' ಯಾತ್ರೆಯು ತನ್ನ ಆಶೆಯ ಗುರಿಯನ್ನು ತೀವ್ರವೇ ಮುಟ್ಟುವದು. ಸ್ವರಾಜ್ಯ ಸಿಗುವವರೆಗೆ ಸಮಾಜ ಸುಧಾರಣೆ ಯನ್ನು ಮುಂದೆ ಹಾಕುವದೆಂದರೆ ಸ್ವರಾಜ್ಯದ ಅರ್ಥವನ್ನೇ ತಿಳಿಯದಂತೆ.

* * * *

## ಸ್ತ್ರೀಯರ ಆರ್ಥಿಕ ಸ್ವಾತಂತ್ರ್ಯ

ವಿವಾಹಿತ ಸ್ತ್ರೀಗೆ ಆಸ್ತಿಯಲ್ಲಿ ಹಕ್ಕು ಇರಬೇಕೆಂದು ಕಾಯಿದೆಗಳ ಸುಧಾರಣೆಯ ವಿಚಾರ ನಡೆದಾಗ ಇಂಥ ಸ್ವಾತಂತ್ರ್ಯಕೊಟ್ಟರೆ ಸ್ತ್ರೀಯರಲ್ಲಿ ಅನೀತಿಯ ಪ್ರಸಾರಕ್ಕೆ ಎಡೆಕೊಟ್ಟಂತಾಗುವದೆಂದು ಹಳಬರು ಹಲವರು ಆಕ್ಷೇಪವೆತ್ತುವ ವಿಷಯದಲ್ಲಿ ನನ್ನ ಅಭಿಪ್ರಾಯವೇನೆಂದು ಒಬ್ಬರು ನನಗೆ ಪ್ರಶ್ನೆ ಹಾಕಿದ್ದಾರೆ. ಈ ಪ್ರಶ್ನೆಗೆ "ಸ್ವಾತಂತ್ರ್ಯ ಮತ್ತು ಆಸ್ತಿಯ ಹಕ್ಕು ಪುರುಷರಿಗೆ ದೊರೆತು ಅವರ ಅನೀತಿಗೆ ಇವು ಕಾರಣವಾಗಿಲ್ಲವೇ?" ಎಂಬ ಪ್ರತಿಪ್ರಶ್ನೆಯಿಂದಲೇ ಉತ್ತರ ಕೊಡಬಲ್ಲೆ. ನನ್ನ ಪ್ರಶ್ನೆಗೆ 'ಹೌದು'

ಎಂಬ ಉತ್ತರವು ಬರಬಹುದಾದರೆ ಹೆಣ್ಣುಮಕ್ಕಳ ವಿಷಯದಲ್ಲಿಯೂ ಅದು ಅನ್ವಯಿಸಬಹುದಾದೀತು. ಸ್ತ್ರೀಯರಿಗೂ ಪುರುಷರಂತೆ ಒಡೆತನದ ಹಕ್ಕು ಮೊದಲಾದುವು ಪ್ರಾಪ್ತವಾದಾಗ, ಇಂಥ ಹಕ್ಕುಗಳ ಅನುಭೋಗವು ಅವರ ಸದ್ಗುಣ ಅಥವಾ ದುರ್ಗುಣಗಳಿಗೆ ಕಾರಣವಾಗಲಾರದೆಂಬುದು ಒಡೆದು ಕಾಣುವದು. ಪುರುಷನ ಅಥವಾ ಸ್ತ್ರೀಯ ದುರ್ಬಲತೆಯನ್ನು ಅವಲಂಬಿಸಿದ ' ನೀತಿ 'ಯು ಈ ಬಗ್ಗೆ ಯಾವ ಶಿಫಾರಸ್ಸನ್ನೂ ಮಾಡಲಾರದು. ನೀತಿಯು ನಮ್ಮ ಅಂತಃಕರಣದ ಅಂತಃಶುದ್ಧಿಯಲ್ಲಿ ಬೇರೂರಿದೆ."

